# ಶೋಷಿತ

ಫೆಬ್ರುವರಿ ೧೯೭೬ ಖಾಸಗಿ ಪ್ರಸಾರಕ್ಕೆ ಸಂಚಿಕೆ : ೩

## ಸಿದ್ಲಿಪುರ ಹರಿಜನರು ಭೂಹೀನರಾದರು ....

( ನಮ್ಮ ವಿಶೇಷ ಪ್ರತಿನಿಧಿಯಿಂದ )

ಭೂಪಾಳಂ ಖಂಡಸಾರಿ ಸಕ್ಕರೆ ಕಾರ್ಖಾನೆ ಭದ್ರಾವತಿ ತಾಲ್ಲೂಕು ಸಿದ್ಲಿಪುರಕ್ಕೆ ಒಂದು ಫರ್ಲಾಂಗ್ ದೂರದಲ್ಲಿದೆ. ಅದಕ್ಕಾಗಿ ಸಿದ್ಲಿಪುರ ಹಾಗು ಸನ್ಯಾಸಿಕೋಡುಮಗ್ಗೆಯ ಸುಮಾರು ನೂರು ಎಕರೆ ಜಮೀನನ್ನು ಆಕ್ರಮಿಸಿಕೊಳ್ಳಲಾಗಿದೆ. ಸದ್ಯ ಇಪ್ಪತ್ತೈದು ಎಕರೆಗಳಷ್ಟು ಭೂಮಿಯಲ್ಲಿ ಕಾರ್ಖಾನೆ ಸ್ಥಾಪಿತವಾಗಿದ್ದರೆ, ಉಳಿದ ನೆಲದಲ್ಲಿ ಕಬ್ಬು ಬೆಳೆಯಲಾಗುತ್ತಿದೆ.

ನೂರು ಎಕರೆ ಭೂಮಿಯನ್ನು ಈಗಿನ ಬೆಲೆಯಲ್ಲಿ ಕೊಳ್ಳಲು ಏಳು ಲಕ್ಷ ರೂ. ಆದರೂ ಬೇಕು. ಆದರೆ ಭೂಪಾಳಂ ಇಷ್ಟು ಬೆಲೆಬಾಳುವ ಫಲವತ್ತಾದ ಭೂಮಿಯನ್ನು ಪಡೆದದ್ದು ನಿಜಕ್ಕೂ ಸ್ವಾರಸ್ಯಕರ. ಈ ನೂರು ಎಕರೆಯಲ್ಲಿ ಸಿದ್ಲಿಪುರ ಹರಿಜನರ ಮೂವತ್ತೊಂದು ಎಕರೆ ಇನಾಮತಿ ಭೂಮಿಯೂ ಸೇರಿದೆ. ಇನಾಮತಿ ಭೂಮಿಯನ್ನು ಮತ್ತೊಬ್ಬರಿಗೆ ಪರಭಾರೆ ಮಾಡುವಂತಿಲ್ಲ ಎಂಬುದು ಅವರಿಗೆ ತಿಳಿದಿರಲಿಲ್ಲ. ಇಂಥ ಭೂಮಿಯನ್ನು ಅವರಿಂದ ಕಿತ್ತುಕೊಳ್ಳಲು ಭೂಪಾಳಂ ತುಂಬಾ ಬುದ್ಧಿ ಓಡಿಸಿದ. ಕಾರ್‍ಯಸಾಧನೆಗಾಗಿ ಸಿದ್ಲಿಪುರದ ಛೇರ್ಮನ್ ಪಟೇಲ್ ರಾಮಪ್ಪನನ್ನು ಹಿಡಿದ. ಪಟೇಲ್ ರಾಮಪ್ಪ, ಹರಿಜನರನ್ನೆಲ್ಲಾ ಕರೆಸಿ ನಿಮಗೆ ಬೇರೆಕಡೆ ಜಮೀನನ್ನು ಕೊಡುತ್ತೇವೆ. ಮತ್ತು ಉಳಲು ನೇಗಿಲು, ಎತ್ತು ಗಾಡಿಗಳನ್ನು ಕೊಡುತ್ತೇವೆ. ಈ ಜಮೀನು ಸರ್ಕಾರಿ ಕಾರ್ಖಾನೆಗೆ ಅಲಾಟ್ ಆಗಿದೆ. ಆದ್ದರಿಂದ ಭೂಮಿಯನ್ನು ಕೊಟ್ಟು ಬಿಡಿ ಎಂದು ಪುಸಲಾಯಿಸಿದ. ಹೆಚ್ಚು ದುಡ್ಡನ್ನೇ ಕಾಣದವರಿಗೆ ನೂರು ನೂರರ ಬಣ್ಣದ ನೋಟುಗಳನ್ನು ಕಂಡ ಕೂಡಲೆ ಕಣ್ಣು ಚುರುಕಾದವು. ಕೆಲವರು ಕೊಡುವುದಿಲ್ಲವೆಂದು ವಿರೋಧಿಸಿದರೂ, ಅವರಿಂದ ಬಲವಂತಮಾಡಿ ಭೂಮಿ ಬಿಡಿಸಿಕೊಂಡರು ಹರಿಜನರು ಇನಾಮತಿ ಜಮೀನನ್ನು ಕ್ರಯಕ್ಕೆ ಮಾರಿದ್ದಾರೆಂದು ಸರ್ಕಾರಕ್ಕೆ ದೂರುಹೋಗಿ ಶಿವಮೊಗ್ಗ ಸೆಷನ್ ಕೋರ್ಟಿನಿಂದ ಅವರಿಗೆ ನೋಟೀಸು ಬಂದವು. ಭೂಪಾಳಂ ಕೆಲವು ಹರಿಜನರನ್ನು ಕರೆದು, ಅವರಿಗೆ ಕುಡಿಸಿ, ತಿನ್ನಿಸಿ "ತಾವು ಇನಾಮತಿ ಜಮೀನನು ಮಾರಾಟ ಮಾಡಿಲ್ಲವೆಂದೂ, ಕೇವಲ ಬೋಗ್ಯ

. . . . . . . . . . . . . .

ಕ್ಕೆ ಹಾಕಿದ್ದೇವೆಂದೂ" ಕೋರ್ಟಿನಲ್ಲಿ ಹೇಳಬೇಕೆಂದು ಹೇಳಿಕೊಟ್ಟ. ನ್ಯಾಯಾಧೀಶರು ಕೋರ್ಟಿನಲ್ಲಿ ಹರಿಜನರನ್ನು ಪ್ರಶ್ನೆ ಮಾಡಿದರು "ಸರ್ವೆ ನಂ. ೮೦. ಮೂವತ್ತೊಂದು ಎಕರೆ ಭೂಮಿಯ ಸುತ್ತ ಭೂಪಾಳಂ ತಂತಿ ಬೇಲಿಯನ್ನು ಹಾಕಿಕೊಂಡಿರುವಾಗ ನೀವು ಜಮೀನನ್ನು ಮಾರಾಟ ಮಾಡಿದ್ದೀರಿ ಎಂದೇ ಅರ್ಥ" ಎಂದಾಗ ಭೂಪಾಳಂ ಹೇಳಿಕೊಟ್ಟಂತೆ "ತಾವು ಬರೀ ಬೋಗ್ಯಕ್ಕೆ ಹಾಕಿರುವುದಾಗಿ" ಹೇಳಿದರು. ಅವರು ಹಾಗೆ ಹೇಳುವಾಗ ಭೂಪಾಳಂ ಕೋರ್ಟಿನ ಕಂಭದ ಮರೆಯಲ್ಲಿಯೇ ನಿಂತು ನೋಡುತ್ತಿದ್ದ. ಇನಾಮತಿ ಭೂಮಿಯನ್ನು ಮಾರಿದ್ದೇವೆಂದರೆ ತೊಂದರೆಯಾದೀತೆಂದು ಸುಳ್ಳು ಹೇಳಿದರು. ಇದಾದ ಕೆಲವು ದಿನಗಳ ತರುವಾಯ ಛೇರ್ಮನ್ ರಾಮಪ್ಪ ಹಾಗು ಕೆಲ ಹರಿಜನರನ್ನು ಕರೆದುಕೊಂಡು ಭೂಪಾಳಂ ಬೆಂಗಳೂರಿಗೆ ಹೋದ. ಅಲ್ಲಿ ಏನು ಬರೆಸಿಕೊಂಡನೋ, ಏನೋ, ಹರಿಜನರಿಗೆ ಸಹಿಹಾಕಿ ಎಂದು ಹಾಕಿಸಿಕೊಂಡ.

**ಕಪಾಳಕ್ಕೆ ಕಣ್ಣೀರು**

ಆ ವರ್ಷ ಹರಿಜನರು ಗದ್ದೆ ನಾಟಿ ಮಾಡಿದ್ದರು. ಗದ್ದೆ ಬೆಳೆದು ನಿಂತಿತ್ತು. ಭೂಪಾಳಂ ನೆಲ

( 2 ನೆಯ ಪುಟಕ್ಕೆ )



ಹನ್ನೆರಡು ಗಂಟೆ ದುಡಿತದ ಪ್ರತಿಫಲ — ಕೂಲಿಗಾರ ಮಕ್ಕಳು

## ಭೂಪಾಳಂ ಕಾರ್ಖಾನೆಯಲ್ಲಿ ಕಾರ್ಮಿಕರ ಶೋಷಣೆ

( ನಮ್ಮ ವಿಶೇಷ ಪ್ರತಿನಿಧಿಯಿಂದ )

ಭೂಪಾಳಂ ಸಕ್ಕರೆ ಕಾರಖಾನೆಯಲ್ಲಿ ಸುಮಾರು ಮುನ್ನೂರು ಜನ ಕೂಲಿಗಾರರಿದ್ದಾರೆ. ಅವರೆಲ್ಲ ರಾಯಚೂರು, ಬೀದರ್, ಗುಲ್ಬರ್ಗ, ಹರಪನಹಳ್ಳಿ, ರಾಣಿಬೆನ್ನೂರು, ಸುರ್‌ಪುರ್ ಮುಂತಾದ ಕರ್ನಾಟಕದ ದೂರ್ಧ ಪ್ರದೇಶಗಳಿಂದ ಒಕ್ಕಲೆದ್ದು ಬಂದವರು. ಹೋದವರ್ಷ ಮಳೆ ಇಲ್ಲದೆ ಪೈರು ಹಾಳಾದವು. ಈಬಾರಿ ಮಳೆ ಹುಚ್ಚಾಬಟ್ಟೆ ಸುರಿದು ಕೊಚ್ಚಿಹೋದವು. ಹೊಟ್ಟೆಗಿಲ್ಲದೆ ಹಿಡಿ ಕೂಳಿಗಾಗಿ ಅಲೆದಾಡುವಾಗ, ಭೂಪಾಳಂ ಕಾರ್ಖಾನೆಯವರು ದಿನಕ್ಕೆ ಆರು ಗಂಟೆ ಕೆಲಸವೆಂದು ತಿಳಿಸಿ ಕರೆತಂದರು. ಆದರೆ ಇಲ್ಲಿ ದಿನಕ್ಕೆ ಹನ್ನೆರಡು ಗಂಟೆ ಕೆಲಸ. ಇಷ್ಟು ಮಾಡಿಸಿಕೊಂಡುಬಿಟ್ಟರೆ ಅವರ ಪುಣ್ಯವೆನ್ನಬೇಕು. ಹೋಗಲು ಮಾತ್ರ ಕಾಲ. ಬರಲಿಕ್ಕೆ ಕಾಲವೇ ಇಲ್ಲ. ಅವರು ಹೋಗು ಅಂದಾಗ ಬರಬೇಕು. ಹಗಲು ಕೆಲಸವಾದರೆ ಮಧ್ಯೆ ಒಂದುಗಂಟೆ ಊಟಕ್ಕೆ ಬಿಡವು. ರಾತ್ರಿಯಾಯಾದರೆ ಸತತ ಹನ್ನೆರಡು ಗಂಟೆ. ಇಲ್ಲವೆ ಅವರು ಹೇಳುವಷ್ಟುಕಾಲ, ನಿಂತ ಕಾಲ ಮೇಲೆ ವಿರಾಮವಿಲ್ಲದ ದುಡಿತ. ಹೆಂಗಸರು ಸೊಂಟಕ್ಕೆ ಕೂಸು ಕಟ್ಟಿಕೊಂಡು ಹಾಲು ಕುಡಿಸುತ್ತಲೆ ಗೆಯ್ಯುವ ದೃಶ್ಯ ಕರುಳು ಕಿವುಚುತ್ತದೆ.

ನಾವು ಆ ಕೊಳಚೆ ಪ್ರದೇಶಕ್ಕೆ ಹೋದಾಗ ರಾತ್ರಿಯೆಲ್ಲಾ ದುಡಿದು ಸೊಪ್ಪಾದ ಹರಿಜನ

( 2 ನೆಯ ಪುಟಕ್ಕೆ )

# ಕಾರ್ಮಿಕರ ಶೋಷಣೆ

( 1ನೆಯ ಪುಟದಿಂದ )

ಹೆಂಗಸೊಬ್ಬಳು ಮೈಮೇಲಿನ ಬಟ್ಟೆ ಪರಿವೆ ಇಲ್ಲದೆ ಗುಡಿಸಲುಮುಂದೆ ಬಿದ್ದಿದ್ದಳು. ಜ್ವರ ದಿಂದ ಮೈ ಕೆಂಡವಾಗಿತ್ತು. ಪಕ್ಕದಲ್ಲಿ ಒಂದು ವರ್ಷದ ಕೂಸು ಕುಯ್ಯೋ ಮುರ್ರೋ ಎಂದು ಒದರುತ್ತಿತ್ತು. ಪ್ರತಿ ಒಂದು ಗುಡಿಸಲೂ ಹೀಗಿ ರುವಾಗ ಯಾರನ್ನು ನೋಡೋದು? ವಿಚಾರಿ ಸೋದು? ಒಂದುಪಕ್ಷ ನಿಗಧಿ ಮಾಡಿದ ಕಾಲಕ್ಕೆ ಹೋಗದೆ, ತಡವಾಗಿ ಕೆಲಸಕ್ಕೆ ಹೋದರೆ, ಅರ್ಧದಿನದ ಕೂಲಿ. ಇಲ್ಲದೆಹೋದರೆ ಮನೆಗೆ ವಾಪಸ್.

ಕಬ್ಬನ್ನು ಮಿಶಿನ್ ಬಾಯಿಗೆ ಹಾಕುವುದರಿಂದ ಹಿಡಿದು, ಸಕ್ಕರೆಯಾಗುವವರೆಗೆ, ಬೇರೆ ಬೇರೆ ಹಂತಗಳಲ್ಲಿ ಕೆಲಸ ನಡೆಯುತ್ತದೆ. ಕಬ್ಬಿನ ರಸ ತುಂಬಿದ ಕೊಪ್ಪರಿಗೆಗಳು ಕಾದು ಕುದಿಯುತ್ತಿ ರುತ್ತವೆ. ಆಕಸ್ಮಾತ್ ಸ ಮೈಮೇಲೆ ಸಿಡಿದೊ, ಬೆಂಕಿ ಹತ್ತಿಕೊಂಡೊ, ಸುಟ್ಟುಕೊಂಡರೆ, ಹೊಡೆತ ಬಿದ್ದರೆ ವೈದ್ಯಕೀಯ ವ್ಯವಸ್ಥೆ ಇಲ್ಲ. ಪರಿಹಾರವಿಲ್ಲ. ಸುಟ್ಕೊಂಡು, ಹೊಡೆತ ಬಿದ್ದು ಮಲಗಿದವರಿಗೆ ಆ ದಿನಗಳಲ್ಲಿ ಕೂಲಿಯೂ ಇಲ್ಲ. "ಕಳೆದ ವಾರ ಐದು-ಆರು ಮಂದಿ ಮೈ ಸುಟ್ಟುಕೊಂಡರೂ ಇಲಾಜಿಗೆ ಹಣ ಕೊಡಲಿಲ್ಲ. ಬರಿ ಮುಲಾಮು ಹಚ್ಚಿದರು" ಎಂದ ಒಬ್ಬಾತ.

**'ಬಾಳೇವು ಬೆಚ್ಚಗಾಗಲಿಲ್ಲ'**

ದಿನದ ಹನ್ನೆರಡು ಗಂಟೆ ಕೆಲಸಕ್ಕೆ ಗಂಡಸರಿಗೆ ಐದು ರೂ, ಹೆಂಗಸರಿಗೆ ಮೂರು ರೂ. ಐವತ್ತು ಪೈಸೆ ಕೊಡಲಾಗುವುದು. ಮೂರು ವರ್ಷದಿಂದ ಆರುವರ್ಷದ ಮಕ್ಕಳು ದಿನವಿಡೀ ಕಬ್ಬಿನಸಿಪ್ಪೆ ಯಲ್ಲಿ ಕಾಲಾಡಿಸಿದರೆ, ಒಂದು ಇಲ್ಲವೆ ಎರಡು ರೂಪಾಯಿ. ವಾರಕ್ಕೊಂದುಬಾರಿ ಬಟವಾಡೆ. ರಜೆ ಇಲ್ಲ. ಬಂದ ಎರಡುವಾರಗಳು ಪೂರ್ತಿ ಕೂಲಿಯನ್ನು ಕೊಡುತ್ತಿದ್ದರು. ಇತ್ತೀಚೆಗೆ ವಾರಕ್ಕೆ ಒಂದು ದಿನದ ಕೂಲಿ ಹಿಡಿಯುತ್ತಾರೆ. ಏಕೆ? ಎಂದರೆ ನೀವು ದಂಧೆ ಸರಿಯಾಗಿ ಮಾಡಿ ಹೋಗುವಾಗ ಒಟ್ಟಿಗೆ ಕೊಡುತ್ತೇವೆ ಎನ್ನು ತ್ತಾರೆ. ಈ ಮಧ್ಯೆ ಕೆಲಸಮಾಡಲಿಕ್ಕಾಗದೆ ಕೆಲ ವರು ಬಿಟ್ಟುಹೋದದ್ದುಂಟು. ಅವರಿಗೆ ಮುರಿದ ಹಣವನ್ನೇನೂ ಕೊಡಲಿಲ್ಲ. ಜೋರುಮಾಡಿದರೆ ಎಲ್ಲಿ ತಮ್ಮನ್ನು ಕೆಲಸದಿಂದ ತೆಗೆಯುವರೋ ಎಂದು ಜನ ಬಂದಷ್ಟೇ ಸಾಕೆಂದು ಸುಮ್ಮನಿ ದ್ದಾರೆ. ಮುದುಕನೊಬ್ಬ: "ಬೇರೆ ಹೆಚ್ಚು ಕೂಲಿ ಸಿಗುವಕಡೆ ಹೋಗಲು ಬಿಡುತ್ತಿಲ್ಲ. ಒಟ್ಟು ಆರು ತಿಂಗಳು ಕೆಲಸವೆಂದು ಕರೆದು ತಂದರು. ಅಷ್ಟರಲ್ಲಿ ಒಂದು ರೂ. ಕೊಟ್ಟರೂ ಮಾಡಬೇಕು. ಎರಡು ಕೊಟ್ಟರೂ ಮಾಡ ಬೇಕು ದೂರದಿಂದ ಬಂದ ನಮ್ಮ ಬಾಳೇವು ಬೆಚ್ಚಗಾಗಲಿಲ್ಲ" ಎಂದ.

**ರೊಕ್ಕ ಇದ್ದರೆ ಜಾತಿ**

ಕಾರ್ಖಾನೆಗೆ, ಹೊಂದಿಕೊಂಡಂತೆ ರಸ್ತೆ ಬದಿ ಯಲ್ಲಿ ವಾಸದ ಜೋಪಡಿಗಳಿವೆ. ಹೆಣೆದ ಬಿದಿ- ರಿನ ತಡಿಕೆಗಳನ್ನು ಬಾಗಿಸಿ ಕಟ್ಟಿದ ಗುಬ್ಬಚ್ಚಿ ಗಗೂಡಿನಂತ ಗುಡಿಸಲುಗಳು. ಮೇಲೆ ಹುಲ್ಲು ಇಲ್ಲ. ಹಗಲು ಜರಡಿಯಂತೆ ಸೂರ್ಯನ ಕಿರಣ ಎಲ್ಲ ಒಳಗೆ ಹರಡಿರುತ್ತದೆ. ರಾತ್ರಿ ಜರಡಿ ಕಣ್ಣು ಗಳ ಮೂಲಕ ಛಳಿಗಾಳಿ ತೂರುತ್ತದೆ. ಪ್ರತಿ ಜೋಪಡಿಯ ವಿಸ್ತಾರ, ಆರರಿಂದ ಎಂಟು ಅಡಿ ಉದ್ದ, ನಾಕು ಐದು ಅಡಿ ಅಗಲ. ಅಲ್ಲಿ ನಾಕು ಇಲ್ಲವೆ ಐದು ಜನರ ಕುಟುಂಬ. ನೀರಿಗಾಗಿ ಪಕ್ಕದ ಹೊಳೆ. ಕಕ್ಕಸ್ಸಿಗೆ ಬಯಲು. ದುಡಿಮೆ ಕೇವಲ ಎರಡು ಹೊತ್ತಿನ ಕೂಳಿಗೆ. ಹಬ್ಬ ಹರಿದಿನಗಳಿಲ್ಲ. ಬಟ್ಟೆಬರೆ ಯೋಚನೆಮಾಡ ವಂತಿಲ್ಲ.

ಅಲ್ಲಿ ಲಿಂಗಾಯತರು, ಕುರುಬರು, ಮುಸಲ್ಮಾ ನರು, ಹರಿಜನರು ಉಪ್ಪಾರರು ಎಲ್ಲರೂ ಒಟ್ಟೊಟ್ಟಿಗೆ ವಾಸಮಾಡುತ್ತಾರೆ. ಜಾತಿಭೇದ ಇಲ್ಲವೆ ಎಂದು ಮುದುಕನೊಬ್ಬನನ್ನ ಕೇಳಲು "ಅವರವರ ಗುಡ್ಲಾಗ ಅವರವರಿರುತ್ತಾರೆ. ಹೊಟ್ಟೆಗೇ ಸರಿಯಾಗಿಲ್ಲ; ಎಲ್ಲಿ ಜಾತಿ ಮಾಡಾಕ ಹೋಗೋಣ. ಕೈಯಾಗ ರೊಕ್ಕ ಇದ್ದರ ಜಾತಿ. ಎಲ್ಲರದೂ ಕೂಲಿ ದಂಧೆ ಅಂದಮ್ಯಾಲ ಜಾತಿ ಎಲ್ಲೈತಿ. ಅವರನ್ನು ನಾವು ಮುಟ್ಟತೇವಿ. ನಮ್ಮನ್ನು ಅವರು ಮುಟುತ್ತಾರ. ಕೂಡಿ ಊಟಗೀಟ ಇಲ್ಲ. ಇದು ಒಂದು ಥರಾ ಸರ್ಕಾರಿ ಬಸ್ಸು ಇದ್ದಂಗ. ಹಂಗೇ ನಡದೇತಿ" ಎಂದ.

**ಉದ್ಧಾರದ ಗುತ್ತೇದಾರರು!**

ಸರ್ಕಾರ ನಿಗಧಿಪಡಿಸಿದ ಕೆಲಸದ ಟೈಮ್ ಮಿತಿ ಇಲ್ಲಿಲ್ಲ. ಸ್ತ್ರೀ-ಪುರುಷ ಸಮಾನ ವೇತನವಿಲ್ಲ. ಎಂಟು ಗಂಟೆಗಿಂತ ಹೆಚ್ಚು ಕೆಲಸಮಾಡಿದರೆ, ಅದನ್ನು ಓವರ್ ಟೈಮ್ ಎಂದು ಪರಿಗಣಿಸಾ ವುದಿಲ್ಲ. ವೈದ್ಯಕೀಯ ನೆರವಿಲ್ಲ. ವಯಸ್ಕ- ನೊಬ್ಬ ಮಾಡೆವ ಕೆಲಸವನ್ನು ಪುಟ್ಟ ಬಾಲಕ ನಿಂದ ಮಾಡಿಸಿಕೊಳ್ಳಲಾಗುವುದು. ಇವೆಲ್ಲದ ರಿಂದ ಭೂಪಾಳಂ ದಿನಕ್ಕೆ ಸಾವಿರದ ಐನೂರು ರೂಪಾಯಿ ಉಳಿತಾಯ ಮಾಡುತ್ತಾನೆ. ಮಾನ ಸಿಕವಾಗಿ, ದೈಹಿಕವಾಗಿ ಚಿತ್ರಹಿಂಸೆಗೆ ಗುರಿ ಯಾದ ಜನ ನಿಟ್ಟುಸಿರಿಡುತ್ತಾರೆ. ಉದ್ಧಾರದ ಗುತ್ತೇದಾರರು ಎಲ್ಲೋ ಮಲಗಿದ್ದಾರೆ.

---

# ಭೂಹೀನರಾದರು

( 1ನೆಯ ಪುಟದಿಂದ )

ಮಟ್ಟಸ ಮಾಡಬೇಕೆಂದು ಕಟೌವು ಮಾಡಲೂ ಬಿಡದೆ ಬೆಳೆದು ನಿಂತ ಭೂಮಿಯನ್ನು ಬುಲ್- ಡೋಜರ್‌ನಿಂದ ನೆಲಸಮಮಾಡಿದ. ಪೈರು ಹಾಳಾಗುವುದನ್ನು ಕಂಡ ಜನಕ್ಕೆ ಹೊಟ್ಟೆಯಲ್ಲಿ ಕೆಂಡ ಸುರುವಿದಂತಾಗಿ ಕಣ್ಣೀರು ಕಪಾಳಕ್ಕೆ ಇಳಿದವು. ಕೈಗೆ ಬಂದ ತುತ್ತು ಬಾಯಿಗಿಲ್ಲ ದಾಯಿತು.

ಪಟೇಲ್ ರಾಮಪ್ಪ ಬೇರೆಕಡೆ ಜಮೀನು ಕೊಡಿ ಸುತ್ತೇನೆ ಅಂದಿದ್ದು ಹಾಗೇ ಮಾಯವಾಯಿತು. ಇದ್ದ ಭೂಮಿ ಕಳೆದುಕೊಂಡ ಜನರು ಒಂದು ದಿನ ಧೈರ್ಯಮಾಡಿ ಭೂಪಾಳಂನನ್ನು ಜಮೀನು ಬಿಟ್ಟುಕೊಡಿ ಎಂದು ಕೇಳಿದರು. ಅವ "ಭೂಮಿ ನಿಮ್ಮದು ಅಂತ ಖಾತೆಇಲ್ಲ ರಿಕಾರ್ಡೂ ಇಲ್ಲ" ಅಂತ ಬೆದರಿಸಿದ. ಈಜನ ತೆಪ್ಪಗಾದರು. ಮತ್ತೆ ಅತ್ತ, ಕಾಲಾಕಲಿಲ್ಲಿ

# ದಲಿತ ನುಡಿ

ನಮ್ಮ ಕಷ್ಟಕೋಟಲೆ ಕಣ್ಣೀರಿಗೆ ನಾವು ಒಬ್ಬೊಬ್ಬರೆ ಒಂಟಿಯಾಗಿ ಹಲ್ಲುಮುರಿ ಕಚ್ಚುವುದರ ಹಿಂದೆ ಒಟ್ಟು ಇಪ್ಪತ್ತುಕೋಟಿ ದಲಿತರ ಮಹಾಶಕ್ತಿ ಹಾಳಾಗುತ್ತಿರುವು ದನ್ನು ಗಮನಿಸಿ ಇನ್ನಾದರೂ ಒಟ್ಟಾಗ ಬೇಕು.

— ಕೆಂಪ

---

# ಒಂದು ಘಟನೆ

'ಅವಳು ನರಳಿ ಕೊರಳಿ ಸತ್ತದ್ದೇಕೆ? ಎಂದು ಅವಳ ಸುತ್ತ ತುಂಬಿದ್ದ ಜನರಲ್ಲಿ ಒಬ್ಬ ಕೇಳಿದ. ಅದಕ್ಕೆ ಒಬ್ಬ 'ಹಸಿವಿನಿಂದ' ಎಂದು ಅವಳ ಸತ್ತ, ಚಾಚಿದ ಕೈಗೆ ೧೦ಪೈಸೆ ಎಸೆದು ಹೋದ.

ನನ್ನ ಸ್ನೇಹಿತ "ನೋಡು ಈ ವ್ಯವಸ್ಥೆಯಲ್ಲಿ ಅವಳು ದಿನಾ ಸತ್ತು ಬದುಕಿದ್ದಳು. ಈ ದಿನ ಬದುಕಲಿಲ್ಲ" ಅಂದ.

ಅಲ್ಲಿದ್ದವರಲ್ಲೊಬ್ಬ "ಅವಳು ಮಠದ ಹಾರು- ವಯ್ಯನವರ ಮನೆ ಮುಂದೆ ಸಾಯಲು ಬಿದ್ದಿ ದ್ದಳು. ಅವರು ಅವಳನ್ನು ಕಷ್ಟಪಟ್ಟು ಅಲ್ಲಿಂದ ಅಟ್ಟುತ್ತಿದ್ದರು. ತನ್ನ ಮನೆ ಮುಂದೆ ಸತ್ತರೆ ತನಗೆ ಪಾಪ ಬರಬಹುದು, ಮೈಲಿಗೆ ಯಾಗಬಹುದು ಅಂದುಕೊಂಡಿರಬಹುದು. ಅವಳು ತೆವಳಿಕೊಂಡು ಬಂದು ಕೊನೆಗೆ ಇಲ್ಲಿ ಸತ್ತಳು. ಪಾಪ ಅವಳಿಗೆ ಸಾಯುವ ಕೊನೆ ಗಳಿಗೆಯಲ್ಲೂ ನೆಮ್ಮದಿ ಇಲ್ಲದಂಗಾ ಯಿತಲ್ಲ" ಅಂತ ನಿಟುಸಿರು ಬಿಟ್ಟ.

ಕೆಲವರಿಗೆ– ಹಾರವಯ್ಯನ ಮೇಲೆ ಕೋಪ. ಕೆಲವರಿಗೆ– ಕೆಲಸ ಮಾಡದ ಸೋಮಾರಿಗಳು ಸಾಯೋದು ಹೀಗೇನೆ ಅನ್ನೋ ನಂಬಿಕೆ. ಒಬ್ಬನಿಗೆ- ಅವಳಿಗೆ ಕೆಲಸ ಸಿಕ್ಕದ ಸಮಾಜದ ಬಗ್ಗೆ ಬೇಸರ. ಇನ್ನೊಬ್ಬನಿಗೆ– ಶ್ರೀಮಂತರು ಕೆಲಸಮಾಡದ ಸೋಮಾರಿಗಳು. ಹಾಗಾ ದರೆ ಅವರು ಹಸಿವಿನಿಂದ ಸಾಯುತ್ತಾರೆ ಎನ್ನುವ ಸಮಸ್ಯೆ. ಮತ್ತೊಬ್ಬನಿಗೆ ಇಂಥ ಸಾವುಗಳಿಗೆ, ದಿನವೂ ಸಾಯುವ ಇಂಥವರಿಗೆ ಶ್ರೀಮಂತರೇ ಕಾರಣ. ಆದ್ದರಿಂದ ಶ್ರೀಮಂತ ಬಡವ ಅನ್ನುವ ವ್ಯತ್ಯಾಸ ಇಲ್ಲದ ಸಮಾಜ ಬರಬೇಕು ಅನ್ನುವ ಕಳಕಳಿ. ಹೆಣದ ಮುಂದೆ ಇಷ್ಟೆಲ್ಲಾ ಲೆಕ್ಕಾಚಾರ ಹಾಕಿದ ಜನ ಸಾವಿನ ಕುತೂಹಲ ಮುಗಿದ ಮೇಲೆ ಎಲ್ಲಾ ಬಯ ಲಾದರು.

ಇದು ಕತೆಯಲ್ಲ. ಹೋದ ವರ್ಷದ ಜನವ ರಿಂಗಳಲ್ಲಿ ನಂಜನಗೂಡಿನ ಶಿವರಾತ್ರೀಶ್ವರ ಕಾಲೇಜಿನ ಮುಂದೆ ನಡೆದದ್ದು.

—ಕಂಡವ

# ಸರಗೂರು ಸುತ್ತಲಿನ ದಲಿತರು

ಹೆಗ್ಗಡದೇವನ ಕೋಟೆ ತಾಲ್ಲೂಕಿನ ದಲಿತ ಸೇವಕ ಸಂಘದ ಯುವಕರಾದ ನಾವು ಇದೇ ತಾಲ್ಲೂಕಿನ ಸರಗೂರು ಹೋಬಳಿಗೆ ಸೇರಿದ ಹಲವಾರು ಊರುಗಳನ್ನು ಇತ್ತೀಚೆಗೆ ಸಂದರ್ಶಿಸಿದೆವು. ನಾವು ಆಗ ಅಲ್ಲಿ ಕಂಡು ಬಂದಂತ ದಲಿತರ ಸ್ಥಿತಿಗತಿಯನ್ನು ಹೇಳಲಿಚ್ಛಿಸುತ್ತೇವೆ.

ಸರಗೂರಿನ ಸುತ್ತಮುತ್ತಲ ಗ್ರಾಮಗಳು ಮೊದಲು ಕಾಡಿನಿಂದ ಆವರಿಸಲ್ಪಟ್ಟಿದ್ದವು. ಯಾರೂ ಬರಲು ಹೆದರುತ್ತಿದ್ದಂತಹ ಆ ಸ್ಥಳದಲ್ಲಿ ಹಲವಾರು ಜನ ದಲಿತರು ಬಂದು ವಾಸ ಮಾಡಲು ತೊಡಗಿದರು. ಇವರಲ್ಲಿ ಹರಿಜನರೇ ಹೆಚ್ಚಾಗಿದ್ದರು. ಆನೆಗಳ ಹುತ್ತವಾದ ಈ ಸ್ಥಳಧಲ್ಲಿ ಅವರು ಕಾಡು ಕಡಿದು ಉತ್ತು ಬದುಕಿದ್ದೇ ದೊಡ್ಡ ಸಾಹಸ. ನಂತರ ಕೆಲವೇ ವರ್ಷಗಳಲ್ಲಿ ಇಲ್ಲಿಗೆ ಬಂದ ಹಣವುಳ್ಳ ಸವರ್ಣೀಯರು ಇವರನ್ನು ಮರುಳು ಮಾಡಿ ಜಮೀನನ್ನು ವಶಪಡಿಸಿಕೊಂಡು ಅವರನ್ನೇ ಜೀತದಾಳುಗಳನ್ನಾಗಿ ಮಾಡಿಕೊಂಡರು. ಅಲ್ಲದೆ, ಇವರನ್ನು ಹೊಲಕ್ಕೆ ಆನೆ ಬರುವ ಜಾಗಗಳಲ್ಲಿ ಕಾವಲು ಕಾಯುವಂತೆ ಮೆಳೆಗಳ ಸಂದಲ್ಲಿ ಗುಳ್ಳೆಗಳ ಮಾಡಿ ವಾಸಿಸಲು ಬಿಟ್ಟರು- ಇದು ಮೊದಲಿನಿಂದ ನಡೆಯುತ್ತ ಬಂದದ್ದು.

ಸರ್ಕಾರ ಜೀತ ಪದ್ಧತಿಯನ್ನು ರದ್ದುಪಡಿಸಿ ಆಜ್ಞೆ ಹೊರಡಿಸಿದ ನಂತರ ಇಲ್ಲಿನ ದಲಿತರ ಸ್ಥಿತಿ ಚಿಂತಾಜನಕವಾಗಿದೆ. ಜೀತ ಮಾಡುತ್ತಿರುವವರನ್ನು ಯಾರಾದರೂ ಅಧಿಕಾರಿಗಳು ಬಂದು ಕೇಳಿದರೆ ಎಲ್ಲಿ ಹೇಳಿಬಿಡುತ್ತಾರೋ ಎಂದು ದುರಾಲೋಚಿಸಿದ ಜಮೀನ್ದಾರರು ಜೀತಗಾರರಿರುವ ಊರಿಗೆ ಸಂಬಂಧಪಟ್ಟ ಯಜಮಾನರುಗಳನ್ನು ಮೊದಲೇ ಪೋಲೀಸ್ ಠಾಣೆಗೆ ಕರೆದೊಯ್ದು "ನಮ್ಮೂರಲ್ಲಿ ಯಾರೂ ಜೀತಕ್ಕಿಲ್ಲ" ಎಂದು ಹೇಳಿಸಿಬಿಟ್ಟರು. ಇಲ್ಲಿನ ಜೀತದ ವೈಶಿಷ್ಟ್ಯವೆಂದರೆ ಕುಟುಂಬವೊಂದರ ಯಾವದೇ ಒಬ್ಬ ಜೀತ ಮಾಡದೆ ಕುಟುಂಬದ ಸದಸ್ಯರೆಲ್ಲರೂ ಜೀತಗಾರರೇ ಆಗಿರುತ್ತಾರೆ.

ನಾವು ಅಲ್ಲಿಯ ಜೀತಗಾರರನ್ನು ಸಂಧಿಸಿ ನೀವು ಜೀತ ಮಾಡುತ್ತಿದ್ದೀರ, ಎಷ್ಟು ಜನ, ಹೇಗೆ ಇತ್ಯಾದಿ ಕೇಳಿದರೆಒಬ್ಬನೂ ಬಾಯಿ ಬಿಚ್ಚಲಿಲ್ಲ. ಕಡೆಗೆ "ಇಲ್ಲ ಸ್ವಾಮಿ, ಯಾರೂ ಜೀತ ಮಾಡುತ್ತಿಲ್ಲ, ಬರೀ ದಿನಗೂಲಿ" ಎಂದರು. ಇದು ಸುಳ್ಳು ಎಂಬುದು ನಮಗೆ ತಿಳಿಯಿತು. ಯಾರಾದರೂ ಅಧಿಕಾರಿಗಳು ಬಂದು ಜೀತ ಮಾಡುತ್ತಿದ್ದೀರ ಎಂದು ಜೀತಗಾರರನ್ನು ಕೇಳಿದರೆ ಇಲ್ಲವೆನ್ನಬೇಕು, ಇಲ್ಲದಿದ್ದರೆ ಒಡೆಯನಿಂದ ತಲೆದಂಡದ ಬೆದರಿಕೆ. ಒದೆತ. ಸಿಕ್ಕಿದ ವಸ್ತುವಿನಿಂದ ಹೊಡೆತ. (ಗಾಡಿ ಗೂಟದಿಂದ ಒದೆತಿಂದ ಸಂದರ್ಭಗಳಿಗೇನೂ ಕೊರತೆಯಿಲ್ಲ.)

ಇಲ್ಲಿನ ಗುಡಿಸಲಲ್ಲಿ ವಾಸವಾಗಿದ್ದ ಜೀತಗಾರ ಕುಟುಂಬವೊಂದರ ಸದಸ್ಯ ಶ್ರೀ ದೊಡ್ಡೇಗೌಡ (50 ವರ್ಷ) ಎಂಬಾತನು ಅಂದು ರಾತ್ರಿ 10 ಘಂಟೆಯ ಸಮಯದಲ್ಲಿ ಕಾಣದಂತೆ ಬಂದು; ತಾನು ಜೀತವಿರುವುದಾಗಿಯೂ, ತನ್ನ ಒಡೆಯನು ಬಹು ಕ್ರೂರಿಯೆಂತಲೂ ಹೇಳಿ ತನ್ನನ್ನು ಬಿಡಿಸಿಕೊಡಿರೆಂದು ಬೇಡಿಕೊಂಡನು. ನಾವು "ಆಗಲಿ ನಾಳೆ ಪೋಲೀಸ್ ಸ್ಟೇಶನ್ನಿಗೆ ಹೋಗಿ ಬಿಡಿಸುವಾ" ಎಂದು ಹೇಳಿ ಕಳುಹಿಸಿದೆವು. ಆದರೆ ಬೆಳಿಗ್ಗೆ ಆತನೇ ಪರಾರಿ. ಹುಡುಕಿದರೆ ಮತ್ತೆ ತನ್ನ ಒಡೆಯನಲ್ಲೇ ಕೆಲಸ ಮಾಡುತ್ತಿದ್ದ. ತಾನು ಪೋಲೀಸ್ ಠಾಣೆ ಹೋದರೆ ಒಡೆಯ ತನ್ನನ್ನು ಕೊಂದೇ ಬಿಡುತ್ತಾನೆಂದು ತಿಳಿದ ಅತ ಹಾಗೆ ಮಾಡಿದ್ದ ನಂತರ ಈತನ 15 ವರ್ಷದ ಮಗನೊಬ್ಬ ತಾನು ಜೀತ ಮಾಡುವುದಕ್ಕಿಂತ ಸತ್ತರೇ ಒಳ್ಳೆಯದು ಎಂದು ನಮ್ಮ ಬಳಿಗೆ ಧೈರ್ಯವಾಗಿಯೇ ಓಡಿ ಬಂದ. ಕಡೆಗೆ ನಾವು ಅವರನ್ನೆಲ್ಲ ಜೀತದಿಂದ ಬಿಡಿಸಿದೆವು. ಆದರೆ ನಾವು ಬಂದಮೇಲೆ ಮತ್ತೆ ಅವರು ಜಮೀನ್ದಾರರ ದಬ್ಬಾಳಿಕೆಯಿಂದಾಗಿ ಜೀತ ಮಾಡದಿರುವರೆ ಎಂಬ ಸಂದೇಹ ಮಾತ್ರ ನಮಗೆ ಹೋಗಿಲ್ಲ.

ಇಂಥ ದಬ್ಬಾಳಿಕೆಯತ್ತ ಇನ್ನಾದರೂ ಸಂಬಂಧಪಟ್ಟವರು ನಿಜವಾದ ಕಾಳಜಿ ವಹಿಸಿ ಬಗೆಹರಿಸುವರೆಂದು ಆಸಿಸೋಣವೇ?

- ಪುಟ್ಟರಂಗಯ್ಯ, ಚಿಕ್ಕೂರು
'ದಲಿತ ಸೇವಕ ಸಂಘ'ದ ಪರವಾಗಿ
ಹೆಗ್ಗಡದೇವನಕೋಟೆ ತಾಲ್ಲೂಕು

.......

## ಅಳಲು

### ಹಾಸ್ಟೆಲೊ? ಕೊಟ್ಟಿಗೆಯೊ?

ಮೈಸೂರು ಜಿಲ್ಲೆಯಲ್ಲಿನ ಹಿಂದುಳಿದ ತಾಲ್ಲೂಕುಗಳಲ್ಲಿ ಒಂದಾದ ಹೆಗ್ಗಡದೇವನ ಕೋಟೆಯಲ್ಲಿ ನಿಮ್ನ ವರ್ಗದ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿ ನಿಲಯ (?) ವೊಂದಿರುವುದು ಸರಿಯಷ್ಟೆ. ಈ ನಿಲಯವನ್ನು ಕಟ್ಟಿದಂದಷ್ಟೇ ಸುಣ್ಣ ಬಳಿದದ್ದಿರಬೇಕು. ಈಗಂತೂ ಅದನ್ನು ನೋಡಲಾಗುವುದಿಲ್ಲ.

ಇಲ್ಲಿ ಆರು ರೂಂಗಳಿದ್ದು ಎಲ್ಲ ರೂಮಿನ ಕಿಟಕಿ ಮತ್ತು ಬಾಗಿಲುಗಳು ಮುರಿದು ಬಿದ್ದಿವೆ. ರೂಂಗಳಂತೂ ನೋಡಲಿಕ್ಕಾಗುವುದಿಲ್ಲ. ಶುದ್ಧ ದನದ ಕೊಟ್ಟಿಗೆಯಂತಾಗಿವೆ. ಯಾರಾದರೂ ಆಪರೂಪಕ್ಕೆ ನೋಡಿದರೆ ದೆವ್ವ ಭೂತದ ಮನೆಯೆಂದು ಅಂಜದೆ ಇರಲಾರರು. ಹಾಗಾಗಿ ಈ ನಿಲಯದಲ್ಲಿರುವ 80 ವಿದ್ಯಾರ್ಥಿಗಳೆಲ್ಲ ಈಗ ನಾಲ್ಕೇ ರೂಂಗಳಲ್ಲಿ ಕುರಿಗಳಂತೆ ವಾಸ ಮಾಡುತ್ತಿದ್ದಾರೆ.

ಇಲ್ಲಿ ಯಾವ ರೂಮಿನಲ್ಲೂ ಲೈಟ್ ಇಲ್ಲ. ವಿದ್ಯಾರ್ಥಿಗಳೆಲ್ಲ ಸಂಜೆ ಆರು ಗಂಟೆಗೇ ಊಟ ಮಾಡಿ ಪೇಟೆ ಸುತ್ತಿ ಬಂದು ಕತ್ತಲಕೋಣೆಯಲ್ಲಿ ಮಲಗುತ್ತಾರೆ. ಅಲ್ಲದೆ ಇಲ್ಲಿನ ಸ್ನಾನ ಮತ್ತು ಮಲ ಮೂತ್ರಗಳ ಕೊಠಡಿಗಳತ್ತಲಂತೂ ಮುಖ ಹಾಕಲಾಗುವುದಿಲ್ಲ. ಇನ್ನು ಊಟ ಇತ್ಯಾದಿಗಳನ್ನಂತೂ ಕೇಳುವ ಹಾಗೇ ಇಲ್ಲ! ಹುಡುಗರು ಬತ್ತಿದ ಮುಖದಿಂದ ಒತ್ತರಿಸಿ ಬಂದ ದುಃಖವನ್ನು ಹಾಗೇ ನುಂಗುತ್ತಾರೆ. ಯಾರೂ ಬಂದು ನೋಡುವುದೇ ಇಲ್ಲ ಅಂತ ತಮ್ಮ ಅಸಹಾಯ ಕತೆಯನ್ನು ತೋಡಿಕೊಳ್ಳುತ್ತಾರೆ.

ಇಂಥ ಸ್ಥಿತಿಯಲ್ಲಿರುವ ದಲಿತ ವಿದ್ಯಾರ್ಥಿಗಳ ಬಗ್ಗೆ ವಿದ್ಯಾರ್ಥಿ ನಿಲಯಗಳ ಸಂಬಂಧಪಟ್ಟವರು ಕಾಳಜಿ ವಹಿಸದಿದ್ದರೆ ಹಾನಿ ಕಟ್ಟಿಟ್ಟದ್ದು.

- ಎಂ. ಬೆಟ್ಟಯ್ಯ
ಜಯಂತಿ ಗ್ರಾಮ
ಹೆಚ್. ಡಿ. ಕೋಟೆ ತಾಲ್ಲೂಕು

.........

### ಸುಲಿಗೆಯಿಂದ ತಪ್ಪಿಸಿ

ನಂಜನಗೂಡು ತಾಲ್ಲೂಕಿನ ಹಲವಾರು ಹಳ್ಳಿಗಳಲ್ಲಿ ರೇಷ್ಮೆ ಬೆಳೆಯನ್ನು ಆಧಸಿರಿ ಜೀವನ ಮಾಡುವ ಹಲವಾರು ಜನ ರೈತರಿದ್ದಾರೆ. ಆದರೆ ಇವರಿಗೆ ಸರಿಯಾದ ಮಾರುಕಟ್ಟೆಯಿಲ್ಲದೆ ಬೆಳೆದ ರೇಷ್ಮೆಗೆ ತಕ್ಕ ಪ್ರತಿಫಲ ದೊರೆಯುತ್ತಿಲ್ಲ. ಈ ಸುತ್ತಲಿನ ಎಲ್ಲ ರೇಷ್ಮೆ ಬೆಳೆಗಾರರನ್ನು ಅಲ್ಲಲ್ಲಿಯ ಕೆಲ ಶ್ರೀಮಂತರು ತಮ್ಮ ಹಿಡಿತದಲ್ಲಿಟ್ಟುಕೊಂಡದ್ದಾರೆ. ರೈತರಿಗೆ ಆಗಾಗ್ಗೆ ಸಾಲ ಹಣಕೊಟ್ಟು ಅವರನ್ನು ಬಲೆಗೆ ಬೀಳಿಸಿಕೊಂಡು ಅವನು ಬೆಳೆಯುವ ಎಲ್ಲ ರೇಷ್ಮೆಯನ್ನು ತಾವೇ ವಶಪಡಿಸಿ ಕೊಳ್ಳುತ್ತಾರೆ. ರೈತನೊಬ್ಬ ಇಂಥ ಶ್ರೀಮಂತನಿಂದ ಒಮ್ಮೆ ಹಣ ಪಡೆದನೆಂದರೆ ಅವನ ಬದುಕಿನುದ್ದಕ್ಕೂ ಆತ ಬೆಳೆಯುವ ಬೆಳೆಯನ್ನು ಅದೇ ಶ್ರೀಮಂತನಿಗೆ ಕೊಡಬೇಕು. ಅಲ್ಲದೆ ಕೆ. ಜಿಗೆ ಇಷ್ಟು ಹಣ ಎಂದು ನಿಗದಿ ಪಡಿಸುವ ಹಾಗಿಲ್ಲ. ಅವನು (ಶ್ರೀಮಂತ) ಕೊಟ್ಟಷ್ಟು ಹಣಪಡೆದು ತೆಪ್ಪಗಾಗಬೇಕು.

ಕಷ್ಟಪಟ್ಟು ದೇಹವನ್ನು ದಂಡಿಸಿ ಬೆಳೆದ ಬೆಳೆಗೆ ಸರಿಯಾದ ಮಾರುಕಟ್ಟೆ ಸಿಗದೆ ರೈತ ಹಾಳಾಗುತ್ತಿದ್ದಾನೆ. ಸರ್ಕಾರ ಅಥವಾ ಸಂಬಂಧಪಟ್ಟ ಇನ್ನಾವುದೇ ಸಂಸ್ಥೆ ಇದಕ್ಕೆ ಬೇರೊಂದು ವ್ಯವಸ್ಥೆಮಾಡಿ' ರೈತರನ್ನು ಇಂಥ ಸುಲಿಗೆಯಿಂದ ತಪ್ಪಿಸಬೇಕು.

- ನಂಜನಹಳ್ಳಿ ನಾರಾಯಣ
ನಂಜನಗೂಡು ತಾಲ್ಲೂಕು

### ಪ್ರಕಟಣೆ

'ಶೋಷಿತ'ವು ಪ್ರಕಟಣೆಗಾಗಿ, ದಲಿತರ ಸಮಸ್ಯೆಗಳನ್ನು ಕುರಿತ ವಿಚಾರಾತ್ಮಕ ಲೇಖನ, ಕವನಗಳನ್ನು ಆಹ್ವಾನಿಸುತ್ತದೆ. ಲೇಖನ ಮಾಮೂಲಿ ಬಿಳಿ ಹಾಳೆಯಲ್ಲಿ ಒಂದು ಪುಟಕ್ಕೆ ಮೀರದಂತೆ ಇದ್ದು, ಲೇಖಕರ ಪೂರ್ಣ ವಿಳಾಸ ಮತ್ತು ಸಹಿಯನ್ನು ಹೊಂದಿರಬೇಕು.

- ಸಂಪಾದಕ

# ಜೀತ, ಸಾಲದ ಬಗ್ಗೆ ಸಿದ್ಧನಹುಂಡಿಯ ಗೋಳು: 'ಹೆಂಗಾದ್ರೂ ಬಿಡ್ಸಿ ನನ್ನ'

ಸರ್ಕಾರದ 20 ಅಂಶಗಳ ಕಾರ್ಯಕ್ರಮ ಎಲ್ಲರೂ ಮೆಚ್ಚುವಂತಹದ್ದು. ಅದರಲ್ಲೂ ಜೀತ ಪದ್ಧತಿ ರದ್ದು ಮತ್ತು ಬಡವರ ಋಣ ವಿಮೋಚನಾ ಆಜ್ಞೆಗಳು ದಲಿತರಲ್ಲಿ ಸಾಕಷ್ಟು ಬದಲಾವಣೆ ತರುವಂತವು. ಆದರೆ ಈ ಆಜ್ಞೆಗಳು ಬಹಳಷ್ಟು ಹಳ್ಳಿಗಳನ್ನು ಇನ್ನೂ ತಲುಪಿಲ್ಲ. ಈ ಬಗ್ಗೆ ಟಿ. ನರಸೀಪುರ ತಾಲ್ಲೂಕಿನ ಸಿದ್ದನಹುಂಡಿಗೆ ಭೇಟಿ ಇತ್ತಾಗ ದೊರೆತ ಮಾಹಿತಿಗಳು ಈ ರೀತಿ ಇವೆ :

ಸುಮಾರು 500 ಜನ ಇರುವ ಸಿದ್ದನಹುಂಡಿಯಲ್ಲಿ ಎಲ್ಲರೂ ಹರಿಜನರೇ. ಊರಿಂದ 3 ಫರ್ಲಾಂಗು ಹೋದರೆ ಬರೀ ಒಕ್ಕಲಿಗರೇ ಇರುವ ಕಗ್ಗಲಿಪುರ ಸಿಗುತ್ತದೆ. ಸಿದ್ದನಹುಂಡಿಯ ಬಹಳಷ್ಟು ಮಂದಿ ಈ ಊರಲ್ಲಿ ದುಡಿದು ಅಥವಾ ಜೀತಕ್ಕಿದ್ದು ಬೆಳೆದವರು. ಮಿಕ್ಕವರು ಅಕ್ಕ ಪಕ್ಕದಲ್ಲಿ ಇರುವ ವ್ಯಾಸರಾಜಪುರ, ಕೆಬ್ಬೆಹುಂಡಿ ಮತ್ತು ಮೋಳೆ - ಈ ಊರುಗಳಲ್ಲಿ ಜೀವನ ಸಾಗಿಸುವವರು.

112 ಮನೆಗಳಿರುವ ಸಿದ್ದನಹುಂಡಿಯಲ್ಲಿ ಸಾಲ ಮಾಡದೆ ಬದುಕುತ್ತೇನೆನ್ನುವ ಒಂದು ಮನೆಯೂ ಸಿಕ್ಕುವುದಿಲ್ಲ. ಹೀಗಾಗಿ ಎಲ್ಲರೂ ಒಂದಲ್ಲ ಒಂದು ರೀತಿಯಿಂದ ಪಕ್ಕದ ಊರುಗಳ ಮೇಲ್ಜಾತಿಯವರ ಸಾಲದ ಹಿಡಿತಕ್ಕೆ ಸಿಕ್ಕಿಕೊಂಡಿದ್ದಾರೆ.

ಒಟ್ಟು ಮನೆಗಳಲ್ಲಿ 42 ಮನೆಗಳವರು ತಮ್ಮ ಇಷ್ಟಗಲ ಮನೆಯ ಹೊರತು ಅನಾಥರು. ಊರೂರು ಅಲೆದು ಕೂಲಿ ಗಿಟ್ಟಿಸಿಕೊಂಡರೆ ಸರಿ. ಇಲ್ಲದಿದ್ದರೆ ಇವರ ಜೀವನಕ್ಕೆ ಮಾರ್ಗವೇ ಇಲ್ಲ. 'ಇತ್ತೀಚ್ಗೆ ಕೂಲೀನೂ ಸಿಕ್ತಾ ಇಲ್ಲ.' ಇನ್ನು ಮಿಕ್ಕ 70 ಮನೆಗಳವರೆಲ್ಲರಿಗೂ ಗದ್ದೆ ಇವೆ ಎಂದೇನೂ ಅಲ್ಲ. ಅವರಿಗೆ ಇದ್ದರೂ ಇಲ್ಲದಂಗೆ. ಇವರಲ್ಲಿ 24 ಮನೆಗಳವರು 20 ಕುಂಟೆಯಿಂದ 1 ಎಕರೆ 20 ಕುಂಟೆಯಷ್ಟು ಗುತ್ತಿಗೆ ಜಮೀನು ಹೊಂದಿದ್ದಾರೆ. ಮಿಕ್ಕ 46 ಕುಳ 2 ಕುಂಟೆಯಿಂದ 1 ಎಕರೆ 20 ಕುಂಟೆಯಷ್ಟು ಸಣ್ಣ ಸಣ್ಣ ಸ್ವಂತ ಜಮೀನುಳ್ಳವರಾಗಿದ್ದಾರೆ.

ಇಷ್ಟು ಜನಕ್ಕೆ ಗದ್ದೆಯಾದರೂ ಇದೆಯಲ್ಲಾ ಎಂದುಕೊಂಡರೆ- ಆಶ್ಚರ್ಯವೆಂದರೆ ಇವರಾರೂ ತಮ್ಮ ಜಮೀನಿನ ಮೇಲೆ ಒಡೆತನ ಉಳಿಸಿಕೊಂಡಿರುವ ಅಥವಾ ಉಳಿಸಿಕೊಳ್ಳುವ ಪರಿಸ್ಥಿತಿ ಇಲ್ಲ. ಏಕೆಂದರೆ ಗುತ್ತಿಗೆ ಜಮೀನುಳ್ಳವರಿಗೆ ಜಮೀನಿನ ಮೇಲಿನ ಒಡೆತನ ನಿರ್ಧಾರವಾಗಿಲ್ಲ. ಮೇಲೆ ಕಾನೂನಿನ ಮಟ್ಟದಲ್ಲಿ 'ಉಳುವವನೆ ಭೂಒಡೆಯ' ಎನ್ನುವಂತಾಗಿದ್ದರೂ ಅದು ಇನ್ನೂ ಪೂರ್ಣವಾಗಿ ಕಾರ್ಯಗತವಾಗಿಲ್ಲ. ಒಡೆಯರೆನಿಸಿಕೊಂಡವರು ಇನ್ನೂ ಒಂದಲ್ಲಾ ಒಂದು ರೀತಿಯಿಂದ ಗುತ್ತಿಗೆಯನ್ನು ವಸೂಲಿ ಮಾಡುತ್ತಲೇ ಇದ್ದಾರೆ. ಇನ್ನೂ

ಮಾತೆತ್ತಿದ್ದರೆ 'ಈರಂಗು' ಎಂದುಕೊಂಡು ನರ
ಮೈಸೂರು ತಿರುಗುವುದು ನಿಂತಿಲ್ಲ. ಇದೇ ಕಾರ
ಸಾಲ ಮಾಡಿಯೂ ಸುಸ್ತಾಗಿದ್ದಾರೆ.

ಒಂದಷ್ಟಗಲ ಸ್ವಂತ ಜಮೀನುಳ್ಳವರು ಇರುವ ಜ
ಕೂಡಾ 'ನಮ್ಮ ಸ್ವಂತದ್ದು' ಎಂದು ಹೇಳಿಕೆ
ಮಟ್ಟದಲ್ಲಿಯೂ ಇಲ್ಲ. ಏಕೆಂದರೆ ಅದರ ಅ
ಮೇಲೆಯೇ 200 ರಿಂದ ಸುಮಾರು 10000 ರೂ
ಗಳಷ್ಟು ಸಾಲ ಮಾಡಿ ಜಮೀನಿನ ಮೇಲಿನ
ವನ್ನೇ ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದಾರೆ.

**'ಕೊಡದೆ ಇರಕಾದದೆ ?'**

ಇತ್ತೀಚೆಗೆ ಕಾನೂನು 'ಜಮೀನು ಪರಭಾರೆ'
ಬಹಿಷ್ಕರಿಸಿರುವುದು ಸ್ವಾಗತಾರ್ಹ ವಿಷಯವೇ
ಆದರೆ ಇದುವರೆಗೆ ಜಮೀನಿನ ಆಧಾರದ ಮೇಲೆ
ರುವ ಸಾಲವನ್ನು ತೀರಿಸುವ ಮಾರ್ಗದಲ್ಲಿ ಬ
ವ ಂದಿ ಕಕ್ಕಾಬಿಕ್ಕಿಯಾಗಿದ್ದಾರೆ. ಋಣ ವಿಮೋ
ಕಾನೂನು ಇಲ್ಲಿ ಅನ್ವಯವಾಗುವುದಾದರೂ
ಇನ್ನೂ ಕಾರ್ಯಗತವಾಗದೆ ಇರುವುದರಿಂದ ಸಾ
ಸದೆ ಬದುಕುತ್ತೇನೆನ್ನುವ ಭರವಸೆಯೇ ಇಲ್ಲ.
"ಕೊಟ್ಟವರಿಗೆ ಕೊಡದೆ ಇರಕಾದದೆ ?" ಎನ್ನು

# ಹಾದಿ ಕಾಣದ ಮಂಗೋಟೆ ದಲಿತರು

( ನಮ್ಮ ಪ್ರತಿನಿಧಿಯಿಂದ )

ಮಂಗೋಟೆ ಭದ್ರಾವತಿ ತಾಲ್ಲೂಕಿನ ಒಂದು ಹಳ್ಳಿ. ಇಲ್ಲಿನ ದಲಿತರ ಸಂಖ್ಯೆ ೧೬೦. ಕುಟುಂಬಗಳು ೨೬. ಮಕ್ಕಳು ೮೨. ಈ ಮಕ್ಕಳ ಪೈಕಿ ಶಾಲೆಯ ಮುಖ ಕಾಣುತ್ತಿರುವವು ಕೇವಲ ೭. ಉಳಿದ ಮಕ್ಕಳು ಒಪ್ಪೊತ್ತಿನ ಕೂಳಿಗಾಗಿ ಅಪ್ಪ ಅವ್ವಂದಿರೊಂದಿಗ ಕೆಲಸಕ್ಕೆ ಹೋಗುತ್ತವೆ.

ಈ ದಲಿತರ ಮನೆಗಳೆಂದರೆ ಬರೇ ಜೋಪಡಿಗಳು. ಅವು ಇರುವುದು ತಿಪ್ಪೆಗುಂಡಿಗಳ ನಡುವೆ. ಮಳೆಗಾಲ ಬಂದರೆ ತಿಪ್ಪೆ ಗುಂಡಿಗಳೆಲ್ಲ ತುಂಬಿ ಭರ್ತಿಯಾಗಿ ಕುಸಿದು ದೊಡ್ಡದಾಗುವುದರೊಂದಿಗೇ ಕೊಳಚೆನೀರು ದಲಿತರ ಹಟ್ಟಿಯೊಳಗೂ ಹರಿಯುವುದರಿಂದ ಜೋಪಡಿಗಳು ಕುಸಿಯಲು ಕ್ಷಣಗಳನ್ನು ಎಣಿಸುತ್ತಿವೆ. ಕೆಲವು ವರ್ಷಗಳಿಂದ ಜಮೀನ್ದಾರನೇಕರು ತಮ್ಮ ಕಣಗಳನ್ನು ಇವರ ಹಟ್ಟಿಗಳ ಕಡೆಗೆ ಒತ್ತರಿಸುತ್ತ ಬಂದಿದ್ದಾರೆ. ತಿಪ್ಪೆ ಗುಂಡಿಗಳು ಮತ್ತು ಕಣಗಳ ನಡುವೆ ಗುಡಿಸಿಲುಗಳು ಕೈಕಾಲು ಚಾಚಲೂ ಆಗದೆ ಗುಬ್ಬಚ್ಚಿ ಗೂಡಿನಂತಾಗಿವೆ. ತಿಪ್ಪೆಗುಂಡಿಗಳ ವಾಸನೆಯಿಂದ ರೋಗಕ್ಕೆ ತುತ್ತಾಗುವುದು ಮಾಮೂಲಿ ವಿಷಯವಾಗಿದೆ.

ಇಲ್ಲಿನ ದಲಿತ ಕುಟುಂಬದ ಯಾವನಿಗೂ ತನ್ನದೆನ್ನುವ ಅಂಗೈಯಗಲ ಜಮೀನಿಲ್ಲ. ಕೇವಲ ನಾಲ್ಕು ಜನ ದಲಿತರು ಹೊಂದಿದ್ದ ತಲಾ ಒಂದೆಕರೆ ಜಮೀನೂ ಎಂಟುವರ್ಷಗಳ ಹಿಂದೆಯೇ ಅದೇ ಊರಿನ ಜಮೀನ್ದಾರನೊಬ್ಬನಿಗೆ ಸೇರಿಹೋಯಿತು.

ಮಂಗೋಟೆ ಗ್ರಾಮದಿಂದ ಸುಮಾರು ೨ ಫರ್ಲಾಂಗ್ ದೂರದಲ್ಲಿ ೬೨-೬೩ ನೇ ಸರ್ವೆ ನಂಬರಿನಲ್ಲಿ ಸುಮಾರು ೮೦ ಎಕರೆಯನ್ನು ಮುಳುಗಡೆಯವರಿಗೆ ಹಂಚಲಾಗಿದೆ. ಅದನ್ನು ಶ್ರೀ ಬುಲ್‌ರಾಜ್ ಎಂಬುವರು ಸಾಗಳಿ ಮಾಡುತ್ತಿದ್ದಾರೆ. ಉಳಿದ ೪೦ ಎಕರೆ ಭೂಮಿ ಅನೇಕ ವರ್ಷಗಳಿಂದ ಹಾಗೆಯೆ ಉಳಿದ್ದು, ಉಳುಮೆ ಮಾಡಲಿಚ್ಚಿಸುವ ದಲಿತರನ್ನು ಜಮೀನ್ದಾರರು ಬೆದರಿಸುತ್ತಾರೆ.

ಪ್ರತಿ ವರ್ಷ ಅಲ್ಲಿನ ದಲಿತರು ಉಳುವ ಭೂಮಿಗಾಗಿ, ವಾಸಿಸುವ ಮನೆಗಾಗಿ ಸಂಬಂಧಪಟ್ಟ ಅಧಿಕಾರಿಗಳಿಗೆ ಅರ್ಜಿಕೊಟ್ಟು, ಕಷ್ಟಗಳನ್ನು ಅವರ ಮುಂದೆ ತೋಡಿಕೊಂಡು ಮುಖ ಬಿಳಿಚಿಕೊಂಡಿದೆ. ಭದ್ರಾವತಿ–ಶಿವಮೊಗ್ಗ ಹಾದಿ ಸವೆಸಿ ಸವೆಸಿ ಕೈಲಿದ್ದ ಅಷ್ಟಿಷ್ಟು ಕಾಸೂ ಖರ್ಚಾಗಿ ಸಾಲಕ್ಕೆ ಕೈಯೊಡ್ಡಿ, ಸಾಲಗಾರರೂ ಆಗಿಬಿಟ್ಟಿದ್ದಾರೆ. ಆದರೂ ಅವರ ಕೂಗು ಅಧಿಕಾರಿಗಳ ಕಿವಿಗೆ ಇನ್ನೂ ತಾಕಿಲ್ಲ. ಗ್ರಾಮ ಪಂಚಾಯಿತಿಯವರಂತೂ ಇದರತ್ತ ಕೊಂಚವೂ ಕಾಳಜಿ ವಹಿಸಿಲ್ಲ, ವಹಿಸುತ್ತಿಲ್ಲ.

ಹಿಂದೊಮ್ಮೆ ಶಿವಮೊಗ್ಗೆಯ ವಿಶೇಷ ಜಿಲ್ಲಾಧಿಕಾರಿಗಳು ಈ ಗ್ರಾಮಕ್ಕೆ ಭೇಟಿಕೊಟ್ಟು, ಮನೆಗಳನ್ನೆಲ್ಲ ಕಂಡು ಜಮೀನು- ನಿವೇಶನ ಕೊಡಿಸುವ ಆಶ್ವಾಸನೆ ಕೊಟ್ಟಿದ್ದರಂತೆ. ಆದರೆ ಆ ಆಶ್ವಾಸನೆ ಕೇವಲ ಬಾಯುಪಚಾರವಾಗಿ ಈವರೆಗೂ ಏನೂ ಆಗದೆ ಇನ್ನೂ ಆಶ್ವಾಸನೆಯಾಗಿಯೇ ಉಳಿದಿದೆ.

***

# ಬೆಂಗಳೂರಲ್ಲಿ ಆದದ್ದು

ಸಾಯಂಕಾಲ ಏಳೊವರೆ. ಕತ್ತಲೆ ಗವ್ ಅಂ
ಕೃಷ್ಣ ಫ್ಲೋರ್ ಮಿಲ್ ಹತ್ತಿರದ ಮುಂದೇ
ರೈಲು ಕಂಬಿ ದಾಟುತ್ತಿದ್ದೆ. "ಅಯ್ಯೋ, ಅಯ್ಯ
ಯಾರಾನ ಬರ್ರಪ್ಪಾ" ಎಂಬ ಕೂಗು ಐದಾ
ಪ್ರತಿಧ್ವನಿಸಿತು. ಅತ್ತ ನೋಡಿದರೆ ಮುಸು
ಐದಾರು ಗುಡಿಸಲು. ಅವುಗಳ ಎದುರ ಕಿ
ಯಲ್ಲಿ ಒಬ್ಬ ಒಬ್ಬಳಿಗೆ ರಪರಪ ಚಚ್ಚುತ್ತಿದ್ದ.
ಹೊಡೆತ. ಅವಳ ಕೂಗು. ಧೈರ್ಯಮಾಡಿ
ವಿಚಾರಿಸಲಾಗಿ ಅವನು ಅಣ್ಣ, ಅವಳು ತಂಗಿ.



ಕೊಡಬೇಕು ಅಂತ ಪೇಪರಲ್ಲೇ ಬಂದಿದ್ದಂತಲ್ಲ ಎಂದೂ ಪ್ರಶ್ನಿಸುತ್ತಾರೆ. ಜಮೀನನ್ನು ಹಾಕಿದ್ದವರಲ್ಲಿ ಒಂದೆರಡು ಜನ ಜಮೀನು ಪಡೆದಿದ್ದರೂ ಸಹ ಊರ ಯಜಮಾನರುಗಳ ಂತೆ ಸಾಲ ಹಣವನ್ನು ಮತ್ತೆ ವಾಪಸ್ಸು ಒಪ್ಪಿಕೊಂಡಿದ್ದಾರೆ. ಈ ಮಧ್ಯೆ ಸಾಲ ಕೊಟ್ಟ ರಗೋಳಗೆ ಪೀಡಿಸಲು ಸುರು ಮಾಡಿದ್ದಾರೆ. ಈ ದ ಭತ್ತನಲ್ಲಿ ಬಹುಪಾಲನ್ನು ತೆತ್ತು ಸುಮ್ಮನೆ ೂ ಇದ್ದಾರೆ.

ನ್ನೂ ಜೀವಂತ

ಮೋಜನೆಯೂ ತಾಗದ ಸಿದ್ದನಹುಂಡಿಯಲ್ಲಿ ಾತೆಯಲ್ಲೇ ಜೀತ ಪದ್ಧತಿ ಇನ್ನೂ ಸಾಕಷ್ಟು ಯೇ ಉಳಿದುಕೊಂಡಿದೆ. ಹಿಂದೆ ಊರಿನ ಜನಕ್ಕೆ ಜೀತವೇ ಆಧಾರವಾಗಿದ್ದರೂ 5 ವರ್ಷಗಳಿಂದೀಚೆಗೆ ಜೀತ ಉಳಿದಿರುವುದು ಗಳಲ್ಲಿ (40 ಜನ). ಜೀತ ಪದ್ಧತಿ ರದ್ದತಿ ಜಾರಿಗೆ ಬಂದ ನಂತರ ಇದರಲ್ಲಿ ಸ್ವಲ್ಪ ಬದ ಲಾಗಿದ್ದರೂ ಸಹ ಜೀತ ಪದ್ಧತಿಯಿಂದ ಇನ್ನೂ ಪೂರ್ತಿಯಾಗಿ ಬಿಡಿಸಿಕೊಳ್ಳಬಾಗಿಲ್ಲ. ಇವರಲ್ಲಿ 10 ರಿಂದ 18 ವರ್ಷ ವಯಸ್ಸಿನ ಕಿರಿಯರು.

# ಶೋಷಿತ ಸಮೀಕ್ಷೆ-೧

ಇವರಿಂದ ಗೇಯಿಸಿಕೊಳ್ಳುವ ಮೇಲ್ಜಾತಿಯವರು 'ದಿನ ಗೂಲಿ ಮಾಡ್ತೀನಿ ಅಂತ ಹೇಳೋ' ಎಂದು ಹುಡುಗರನ್ನು ತಿದ್ದಿದ್ದಾರೆ. ಕೆಲವರು ನಿಜವಾಗಿ ದಿನಗೂಲಿ ಕೊಡುತ್ತಿದ್ದರೂ, ಅದು ತಿಂಗಳಿಗೆ 25 ರೂ. ಮಂಡ್ಯ ಜಿಲ್ಲೆಯ ಮಹದೇವರ ಪುರದಲ್ಲಿ ಜೀತಕ್ಕಿರುವ ನಿಂಗಣ್ಣ ಮತ್ತು ಬಸವ ಎನ್ನುವ ಇಬ್ಬರು ಮಕ್ಕಳನ್ನು ಅವರ ತಂದೆ ತಾಯಿಗಳು ಒತ್ತಾಯ ಮಾಡಿದರೂ ಅವರನ್ನು ಅವರ ಒಡೆಯ ಊರಿಗೆ ಕಳಿಸಿಲ್ಲ. ಬೇವಿನಹಳ್ಳಿ ಸಣ್ಣೇಗೌಡನ ಮನೆಯಲ್ಲಿ ಜೀತಕ್ಕಿರುವ ರಂಗ (16 ವರ್ಷ) "ನನ್ನದು ನರಹಿಂಸೆ ಸಾಮಿ, ಹೆಂಗಾದರೂ ಮಾಡಿ ನನ್ನ ಬಿಡ್ಸಂಗ್ ಮಾಡಿ" ಎನ್ನುತ್ತಾನೆ. ಸುಮಾರು ಜನ ಜೀತದಿಂದ ಮುಕ್ತವಾಗಿದ್ದರೂ ಸಹ ಒಡೆಯನ ಹಿಕ್ಮಳದಿಂದ ಬಿಡಿಸಿಕೊಳ್ಳಲಾಗಿಲ್ಲ. ಮನೆಯ ಮುಂದೆ ನಿಂತು :"ಸಾಲ ತೀರಿಸು ಇಲ್ಲ ನಿನ್ನ ಮಗನ್ನ ಜೀತಕ್ಕೆ ಕಳಿಸು" ಎನ್ನುವ ರಾಕ್ಷಸ ಧ್ವನಿಯಿಂದ ಸಿದ್ದನಹುಂಡಿಯ ಹರಿಜನರಿನ್ನೂ ಮುಕ್ತರಾಗಿಲ್ಲ.

***

ನಿಜವಾದ ಜೀವನವೆಂದರೆ ಒಂದು ನಿರಂತರ ಹೋರಾಟ.

- ಬೋಯಿ ಭೀಮನ್ನ

# ಅಂಬೇಡ್ಕರ್ ಸ್ಮರಣ ದಿನಾಚರಣೆ

೧೯೭೫ ರ ಡಿಸೆಂಬರ್ ೭ ರಂದು ಮೈಸೂರಲ್ಲಿ ಅಂಬೇಡ್ಕರ್ ಸ್ಮರಣ ದಿನೋತ್ಸವ ಹೊಸ ರೀತಿಯಲ್ಲಿ ಆಚರಿಸಲ್ಪಟ್ಟಿತು. ೪ ರಿಂದಲೇ ಅಶೋಕಪುರಂನಲ್ಲಿ ವಿಚಾರ ಸಂಕಿರಣದೊಂದಿಗೆ ಪ್ರಾರಂಭಗೊಂಡ ಈ ಕಾರ್ಯಕ್ರಮಕ್ಕೆ ಹೊಸ ಜೀವಕಳೆ ತುಂಬಿತ್ತು. ದಲಿತ ಯುವಕರು, ವಯಸ್ಕರು, ಮುದುಕರು ಭಾಗವಹಿಸಿದ್ದರು. ಮಾಮೂಲಂತೆ ಅಂಬೇಡ್ಕರ್ ಜಪಮಾಡಿ, ಹರಿಕತೆಯಂತಾಗುತ್ತಿದ್ದ ಈ ಸ್ಮರಣ ದಿನಾಚರಣೆ ಆ ಮೂರು ದಿನಗಳಲ್ಲಿ ದಲಿತರ ಮೂಲಭೂತ ಸಮಸ್ಯೆಗಳನ್ನು ಚರ್ಚಿಸಲು ಅನುವು ಮಾಡಿಕೊಟ್ಟಿತು. ದಲಿತರಲ್ಲಿ ಕೊಂಚಮಟ್ಟಿಗಾದರೂ ಪ್ರಜ್ಞೆ ಬೆಳೆಯಲು ಇದು ಸಹಕಾರಿಯಾಯಿತಾದರೂ, ಬರೀ ವಿಚಾರವಂತರ, ವಿದ್ಯಾವಂತರ, ಬುದ್ಧಿ ಜೀವಿಗಳ ನಡುವೆಯೇ ಸಿಕ್ಕಿ ಸಾಮಾನ್ಯನಿಗೆ ನಿಲುಕದ್ದಾಯಿತು. ವಿಶೇಷವೆಂದರೆ ದಲಿತರಲ್ಲಿ ಪ್ರಜ್ಞೆ ಮೂಡಿಸುವ "ದಲಿತ ಕೈಪಿಡಿ" ಪುಸ್ತಕ ಬಿಡುಗಡೆಯಾದದ್ದು.

* ಅದೇ ದಿನ ಕುಕ್ಕರಹಳ್ಳಿಯಲ್ಲಿ ಸ್ಮರಣ ದಿನಾಚರಣೆಯ ಜತೆಗೆ 'ದಲಿತ ಯುವಕ ಸಂಘ' ದ ಉದ್ಘಾಟನೆಯಾಯಿತು. ಕಲಿತ ಯುವಕರ ಭಾಷಣಗಳು ದಲಿತನಿಗೆ ದಕ್ಕಲಾರವು ಎನಿಸಿತು. ದಲಿತ ಸಮಸ್ಯೆಗಳಿಗೇ ಮೀಸಲಾದ 'ಶೋಷಿತ' ಪತ್ರಿಕೆಯನ್ನು ಅಲ್ಲಿಯ ೭೦ ವರ್ಷದ ರೈತ ಕಾರ್ಮಿಕ ಕೆಂಪಯ್ಯ ಬಿಡುಗಡೆಮಾಡಿದ್ದು ಕೂತಿದ್ದ ದಲಿತರಲ್ಲಿ ಕೊಂಚ ಆಶಾಭಾವನೆಯನ್ನು ಉಂಟುಮಾಡಿತು.

* ತಾರೀಕು ೭ ರಂದು ಮಾನಸ ಗಂಗೋತ್ರಿಯಲ್ಲಿ ಸ್ಮರಣ ದಿನಾಚರಣೆಯು ರಾಜಕಾರಣಿ ಮತ್ತು ಉನ್ನತ ಹುದ್ದೆಯಲ್ಲಿರುವವರ ಭಾಷಣಗಳೊಂದಿಗೆ ನಡೆಯಿತು. ಸ್ನಾತಕೋತ್ತರ ವಿದ್ಯಾರ್ಥಿಗಳು ಆಚರಿಸಿದ ಈ ದಿನಾಚರಣೆಯು ಹಳೆಯ ಹಾಡನ್ನೇ ಹಾಡಿ ಚಪ್ಪಾಳೆ ಚಪಲದಿಂದ ಮುಕ್ತಾಯಗೊಂಡಿತು.

–ಕಂಡವ.

ಬಟ್ಟೆ, ರೂಪ ಥೇಟ್ ಭಾರತೀಯರದು. ರೆ ಈ ಭಾರತೀಯನು ಆ ಭಾರತೀಯಳಿಗೆ ಹೊಡೆದ.

ಪ್ಪ ಈಥರ ಮಾತಿ?" ನಾ ಕೇಳಿದೆ

ಮದ್ವೆ ಮಾಡ್ಬೇಕಂತೆ" ಅವನು ಸರ್ಕನೆ ಹೇಳಿದ.

ಮಾಡೊಡ್ ಬಟ್ಟು ಇದ್ಯಾಕೆ ಚಚ್ತೀ ?" ಹೊಡೆಸಿಕೊಳ್ಳುತ್ತಿದ್ದ ೨೦ ರ ಆ ಸಪೋರ್ಟ್ ಬಂದಂಗಾಗಿ ಹುರುಪಿನಿಂದ



ಜೋರಾಗಿ ಅಳಲು ಶುರು ಮಾಡಿದಳು. ಅವನಿಗೆ ರವಷ್ಟು ಸ್ಫೂರ್ತಿ ಹೋಗಿ

"ಗಂಡ್ ಎಲ್ಲಣ್ಣಾ ಸಿಕ್ತಾನೆ" ಎಂದ.

ನಾನು ಶಿರ್ಗ "ತಡಾ ಆದ್ರೂ ಪರವಾಗಿಲ್ಲ ಗಂಡ್ ಹುಡ್ಕಿ ಮದ್ವೆ ಮಾಡೋದಪ್ಪ" ಅಂದೆ.

"ಅಲ್ಲೀವರ್ಗೂ ಈ ರಂಡೆ ತಡ್ಕೋಬೇಕಲ್ಲ" ಅಂದ.

"ಏನಯ್ಯಾ ಮಾಡುದ್ಲು" ಅಂದದಕ್ಕೆ–

"ಏನಂತ ಹೇಳಾನ ಅಣ್ಣನ್ ಮುಂದೇನೆ ಬ್ಯಾರೇನ್ ಕಯ್ಲಿ ದೆಂಗುಸ್ಕತ್ತಿದ್ಲು. ಅದನ್ನ ನೋಡ್ಕಂಡ್ ಹಂಗೇ ನಿಂತ್ಕಂಡ್ರೆ ನನ್ ಮಾನಾ ಏನಾಗ್ಬೇಕಣ್ಣ ನೀವೇ ಹೇಳ್ರಣ್ಣ" ಅವನು ಗಡುಸಾಗಿಯೇ ಹೇಳಿದ.

"ಇಂಥಾ ಕ್ಯಲ್ಸ ಏನಮ್ಮ ಮಾಡೋದು" ಇದನ್ನೆಲ್ಲ ಕೇಳುತ್ತಿದ್ದ ಒಬ್ಬ ಮುದುಕರು ಸೌಜನ್ಯದಿಂದಲೇ ಕೇಳಿದರು.

ಅವಳು ಅವನ ಅಣ್ಣನಿಂದ ಮುಂದಲೆಯನ್ನು ಬಿಡಿಸಿಕೊಂಡು ಒಂದು ಮಾರು ಹಿಂದಕ್ಕೆ ನ್ಯಗೆದು, ಅವನಣ್ಣ, ಮುದುಕ ಎಲ್ಲರ ಕಡೆಗೆ ಕ್ಯಾಕರಿಸಿ ತುಬಕ್ಕನೆ ಉಗಿದು, ಥೂ ನರಸತ್ತ ನಾಮರ್ದ ನನ್ನಮಕ್ಳ ನನ್ಗೆ ಮದ್ವೇನೂ ಮಾಡಕಾಗಲ್ಲ. ನಾನೇ ಒಬ್ನ ಕೈಲಿ ಮಜಾ ಮಾಡುಸ್ಕಂಡ್ರೆ ಅದುಮ್ಕಂಡು ಸುಮ್ಕಿರಕೂ ಆಗಲ್ಲ. ಮಾನ ಮರ್ಯಾದೆ ಬ್ಯಾರೆ ಹೇಳ್ಕೊಡ್ತೀರೇನ್ರೋ, ಲೇ ಮಾನಾ ಅನ್ನೋದು ಯಂಗದೆ ತೋರ್ಸ್ರಿ, ಇಲ್ದಿದ್ರೆ ಒಬ್ಬಬ್ಬನ್ಗೆ ಚಡ್ಡೀ ಬಿಚ್ಚಿ ವಡೀತೀನಿ" ಅನ್ನುತಿದ್ದಂಗೆ ಅವನಣ್ಣ ಜೋಪಡಿ ಒಳಕ್ಕೆ ಹೋದ. ನ್ಯಾಯಾ ಕೇಳಲು ನಿಂತಿದ್ದವರೂ ಪರಾರಿಯಾದರು.

– ಸಿದ್ದಲಿಂಗಯ್ಯ.

ಭಾರತದ ಕೋಮು ಸಮಸ್ಯೆಯು ಒಂದು ಜಟಿಲ ಮತ್ತು ನಿಜವಾದ ಸಮಸ್ಯೆಯಾಗಿದೆ. ಅದನ್ನು ಆದಷ್ಟು ಜಾಗ್ರತೆಯಾಗಿ ಪರಿಹರಿಸಬೇಕು.

- ಅಂಬೇಡ್ಕರ್

# ದಾಖಲೆಗಳು

೧೯೭೮ ನೇ ಜನವರಿಯಿಂದ ಕನ್ನಡ ದಿನ ಪತ್ರಿಕೆಗಳಲ್ಲಿ ಸಂಗ್ರಹಿಸಿದ ದಲಿತರ ಮೇಲೆ ನಡೆದ ದೌರ್ಜನ್ಯದ ಸುದ್ದಿಗಳು—೨

* ೮-೨-೭೮ : ಮೈಸೂರಿನ ಗಾಂಧೀನಗರದಲ್ಲಿ ಟೂರಿಂಗ್ ಟಾಕೀಸೊಂದರ ಗೇಟ್ ಕೀಪರ್ ಆಗಿದ್ದ ದಲಿತನೊಬ್ಬನಿಗೆ ಚೂರಿ ಇರಿತದಿಂದ ಕೊಲೆ—ಮುಸ್ಲಿಮರಿಂದ.

* ೯-೨-೭೮ : ಬೆಂಗಳೂರು ಕೃಷಿವಿಜ್ಞಾನ ಕಾಲೇಜು ವಿದ್ಯಾರ್ಥಿ ನಿಲಯದಲ್ಲಿ ಸವರ್ಣೀಯ ವಿದ್ಯಾರ್ಥಿಗಳಿಂದ ದಲಿತ ವಿದ್ಯಾರ್ಥಿಗಳ ಮೇಲೆ ಗೂಂಡಾಗಿರಿ-ದೌರ್ಜನ್ಯ.

* ೧೪-೨-೭೮ : ಬಿಜಾಪುರ ಜಿಲ್ಲೆಯ ಚಡಚಣ ಗ್ರಾಮದ ದಲಿತ ಮಹಿಳೆಯೊಬ್ಬಳ ಮಾನಭಂಗ— ಅಲ್ಲಿಯ ಸಬ್ ಇನ್ಸ್‌ಪೆಕ್ಟರಿಂದ.

* ೨೨-೨-೭೮ : ಬಂಡ— ಮಧ್ಯಪ್ರದೇಶದ ಅಭಾವ ಪೀಡಿತ ಛತ್ತೀಸ್‌ಗಡ ಪ್ರದೇಶದ ೧೯ ವರ್ಷ ವಯಸ್ಸಿನ ದಲಿತ ಹುಡುಗಿಯೊಬ್ಬಳನ್ನು ಇಲ್ಲಿಗೆ ೧೦ ಕಿ.ಮೀ ದೂರದ ಅಲಿಹ ಗ್ರಾಮದಲ್ಲಿ ಹರಾಜು ಮಾಡಿ ಠಾಕೂರನೊಬ್ಬನಿಗೆ ೮ ಸಾವಿರ ರೂಗಳಿಗೆ ಮಾರಾಟ ಮಾಡಲಾಯಿತು.

* ೨೫-೨.೭೮ : ಕೊತ್ತಗುಂಡಂ:- ಆಂದ್ರದ ಖಮ್ಮಂ ಜಿಲ್ಲೆಯ ಎಲ್ಲಂದೂ ತಾಲ್ಲೂಕಿನ ಸಂತಾನಿಗುಡು ಗ್ರಾಮದ ಮೇಲೆ ಸುಮಾರು ೪೦ ಮಂದಿ ಹಲ್ಲೆ ನಡೆಸಿದ ಕಾರಣ ದಲಿತರ ಮುವತ್ತು ಮನೆಗಳ ಜಖಂ. ಹೆಂಗಸರೂ ಸೇರಿ ೭ ಜನಕ್ಕೆ ಗಾಯ.

ಹಾಸನ : ಇಲ್ಲಿಗೆ ಸಮೀಪದಲ್ಲಿನ ಗುಡ್ಡದ ತೆರಣ್ಯ ಗ್ರಾಮದ ದೇವಯ್ಯ ಎಂಬ ದಲಿತ ವ್ಯಕ್ತಿಯೊಬ್ಬನನ್ನು ಫೆ. ೧೨ ರಂದು ಇದೇ ಗ್ರಾಮದ ಚಂದ್ರಸ ಮತ್ತು ಇತರೆ ಹನ್ನೊಂದು ಮಂದಿ ದೊಣ್ಣೆಗಳಿಂದ ಹೊಡೆದು ಗಾಯಗೊಳಿಸಿದ್ದು, ತೀವ್ರ ಗಾಯಗೊಂಡಿದ್ದ ದೇವಯ್ಯ ೨೩ ರಂದು ಇಲ್ಲಿ ಆಸ್ಪತ್ರೆಯಲ್ಲಿ ಮೃತಪಟ್ಟ.

* ೨೪-೩-೭೮ : ಬಸ್ತಿ : ಖಲೀಲಾಬಾದ್ ಪೋಲೀಸ್ ಠಾಣೆ ವ್ಯಾಪ್ತಿಗೆ ಸೇರಿದ ಭಕಾನ್ ಗ್ರಾಮದಲ್ಲಿ ದಲಿತರ ಗುಡಿಸಲುಗಳ ಮೇಲೆ ಎರಡು ಕೈ ಬಾಂಬ್‌ಗಳನ್ನೆಸೆದು ಹಲವು ಬಾರಿ ಗುಂಡು ಹಾರಿಸಿದ ಕಾರಣ ೧೨ ಮಂದಿ ಗಾಯಗೊಂಡರು. ಮೇಲುವರ್ಗದವರ ಬೆಳೆ ಕಟಾವು ಮಾಡಲು ದಲಿತರು ನಿರಾಕರಿಸಿದ್ದೆ, ಈ ಹಲ್ಲೆಗೆ ಕಾರಣ.

(—ಮುಂದುವರೆಯುವುದು)

## ಕರೆ

ಗಾಳಿ ಮಳೆ ಬಿಸಿಲೆನ್ನದೆ
ದೂಳೆನ್ನದೆ ಬೆವರ ಹರಿಸಿ
ಗುಳಿಬಿದ್ದ ಕಣ್ಣುಗಳ ಅಂಟಿದ
ಕೆನ್ನೆಗಳ, ಎಣಿಸುವ ಎದೆ
ಎಲಬುಗಳಂಚಲ್ಲಿ, ಇದ್ದ ಮಾಂಸದ
ಚೂರು ರಕ್ತ ಆವಿಯಾದರೂ
ಒಡೇರ ಮನೆ ಕಣಜ ತುಂಬಿಸಲು
ದುಡಿಯುತ್ತಿರುವ ಬಂಧುಗಳೇ—
ಸಾಕು—
ನೀವು ಇಷ್ಟು ದುಡಿದುದು ಸಾಕು
ಅವರ ಬಂಗಲೆ ಬಣ್ಣ ಕಂಡಿವೆ.
ಇವರ ಗುಪ್ಪೆ ಚಿನ್ನ ಗುಡ್ಡವಾಗಿವೆ.
ನಿಮ್ಮ ಗುಡಿಸಲ ಊರುಗೋಲು
ಓರೆಯಾಗಿದೆ ನೋಡಿ
ಬನ್ನಿ—
ಶಿಗಣೆಯಂದದಿ ನಿಮ್ಮ ತೊಟ್ಟು
ನೆತ್ತರ ಹೀರಿ, ತಮ್ಮ ಬೊಜ್ಜು ಬೆಳೆಸಿದ
ನಿಮ್ಮ ಐಶ್ವರ್ಯದ ಒಡೇರ
ತಲೆಯೊಡೆಯುವಾ
ಕೊಬ್ಬಿದ ಗೊಬ್ಬರ ಹುಳುವಿನ
ಕರುಳ ರಸ ಹೀರುವ ಕಾಗೆಯಂತೆ,
ಖದೀಮ ಒಡೆಯರ ಐಶ್ವರ್ಯದ
ಒಡಲ ಒದರೊದರಿ ತಿನ್ನಲು
ಬನ್ನಿ...ಬನ್ನಿ...ಬನ್ನಿ..,

—ಎಸ್. ಕೆ. ಕೃಷ್ಣಮೂರ್ತಿ

## ಎಲ್ಲಾ ಇದೆ ಆದರೆ........ಎಲ್ಲರಿಗಿಲ್ಲ

( ನಮ್ಮ ವಿಶೇಷ ಪ್ರತಿನಿಧಿಯಿಂದ )

ತಿರುಗಾಡಲು ರಸ್ತೆ ಇದೆ. ದವಸಧಾನ್ಯಕ್ಕೆ ಸಹಕಾರಿ ಸಂಘವಿದೆ. ಕ್ಷೌರಕ್ಕಾಗಿ ಕ್ಷೌರಿಕನಿದ್ದಾನೆ. ಕಾಫಿಗಾಗಿ ಹೋಟೆಲಿದೆ. ಎಲ್ಲಾ ಇದೆ. ಆದರೆ....ಎಲ್ಲರಿಗಿಲ್ಲ.

ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನಲ್ಲಿ ನೆಲಮಾಕನಹಳ್ಳಿಯೂ ಒಂದು. ಇಲ್ಲಿಗೂ ಮಳವಳ್ಳಿಗೂ ಎರಡೇ ಮೈಲಿ.

ಬೆಂಗಳೂರು ದಾರಿಯ ಪಕ್ಕದಲ್ಲೇ ಸಿಗುವ ನೆಲಮಾಕನಹಳ್ಳಿಯೊಳಕ್ಕೆ ಹಾದಿ ನೆಟ್ಟಗೇ ಇದೆ. ಈ ದಾರಿಯಲ್ಲಿ ಮೊದಲು ಸಿಕ್ಕುವುದು ಒಕ್ಕಲಿಗರ ಕೇರಿ. ನಂತರ ಹೊಲ್ಗೇರಿ. ಹೊಲಗೇರಿಗೆ ಹೋಗಬೇಕಾದರೆ ಈ ಒಕ್ಕಲಿಗರ ಹೊಲಗಳನ್ನು ಬಳಸಿ ಹೋಗಬೇಕು. ಈ ಹಾದಿಯಲ್ಲಿ ಹರಿಜನರೇನಾದರೂ ತಿರುಗುವುದನ್ನು ಹೊಲದೊಡೆಯರು ಕಂಡರೆ "ನಿಮ್ಮಪ್ಪನ ಮನೆ ದಾರಿಯಾ" ಎಂದು ಗದರಿಸುತ್ತಾರೆ. ಬೆಳೆಸಿನ ಕಾಲದಲ್ಲಿ ತಿರುಗಾಡುವಾಗ ಸಿಕ್ಕಿದರೆ ಕಪಾಳಕ್ಕ ಬಾರಿಸಿಯೂ ತೀರುತ್ತಾರೆ.

ವಿಶೇಷವೆಂದರೆ ಇಲ್ಲಿನ ಸರ್ಕಾರಿ ದಾರಿಯಲ್ಲಿ ಹರಿಜನರು ತಿರುಗಾಡುವ ಹಾಗಿಲ್ಲ. ಆಕಸ್ಮಾತ್ ತಿರುಗಾಡಿದರೆ "ಏನ್ರಲಾ ನಿಮ್ಮ ಧಿಮಾಕು ಮೆರಿತಾಇದ್ದೀರಿ" ಮುಂತಾದ ಬೈಗುಳ. ಪಂಚೆಯುಟ್ಟು ತಿರುಗುವಂತಿಲ್ಲ. ಇನ್ನು ಚಪ್ಪಲಿ ಮಾತೇಕೆ? ಒಂದುವೇಳೆ ಪಂಚೆಯುಟ್ಟು ಚಪ್ಲಿ ಮೆಟ್ಟಿದರೆ ಅವನ ಗತಿ ಅಪ್ಪಚ್ಚಿ. ನ್ಯಾಯಮಾಡಿ ದಂಡಹಾಕಿ ಅಷ್ಟಕ್ಕೂ ಬಿಡದೆ ಮೈ ಸುಲಿಯುತ್ತಾರೆ. ಹೋಟೆಲ್ ಮತ್ತು ಕ್ಷೌರಿಕನ ಹತ್ತಿರಕ್ಕಂತೂ ಪ್ರವೇಶವೇ ಇಲ್ಲ. ಹೋಟೆಲ್ ಮನೆ ಹಾಳು ಬೀಳಲಿ ಕ್ಷೌರಕ್ಕಾದರೂ ಬೇಡವೆ? ತಿರುಗಾಡಲು ಬಲವುಳ್ಳವರು ಮಳವಳ್ಳಿಗೆ ಹೋಗುತ್ತಾರೆ. ಮಕ್ಕಳು, ಮುದುಕರ ಗತಿ?

ಇನ್ನು ಸಹಕಾರ ಸಂಘವೊಂದಿದೆ. ಮೂಟೆಗಟ್ಟಲೆ ಅಕ್ಕಿ ಗೋದಿ ಜೋಳ ಸಕ್ಕರೆ ರಾಸಾಯನಿಕ ಗೊಬ್ಬರ ಬಂದು ಬೀಳುತ್ತದೆ. ಹರಿಜನರು ಕೇಳಿದರೆ "ಖೋಟಾ ಇನ್ನೂ ಬಂದಿಲ್ಲ" ಎನ್ನುತ್ತಾರೆ. ಹಿಂದುಗಡೆಯಿಂದ "ಇಲ್ಲೇ ತಕ್ಕೊಂಡು ಬದ್ಕೊವಂಗೆ ಆಡ್ತಾವೆ" ಎಂಬ ಕೊಂಕು ನುಡಿ. ಒಮ್ಮೊಮ್ಮೆ ಸಕ್ಕರೆ ಇದೆ ಎಂದದ್ದೂ ಉಂಟು.

ಇಲ್ಲಿನ ಹರಿಜನರಲ್ಲೇ ಅಕಸ್ಮಾತ್ತಾಗಿ ಕಲಿತ ಒಬ್ಬ ಕೊಲೆಯಾದ. ಮತ್ತೊಬ್ಬ ದೂರ ದೂರಿನಲ್ಲಿ ಕಾರಿನ ಡ್ರೈವರ್. ಅಪ್ಪಿತಪ್ಪಿ ಪತ್ರ ಗಿತ್ರ ಬಂದರೆ ಜನ ಆಕಾಶ ನೋಡುವುದೇ ಬಾಕಿ.

ಇಷ್ಟೆಲ್ಲ ನಡೆಯುತ್ತಿರುವುದು ಒಬ್ಬ ರಾಜ್ಯಸಭಾ ಸದಸ್ಯ, ಒಬ್ಬ ಕರ್ನಾಟಕದ ಶಿಕ್ಷಣ ಮಂತ್ರಿ, ಒಬ್ಬ ವಿಧಾನ ಪರಿಷತ್ತಿನ ಸದಸ್ಯ ಒಬ್ಬ ವಿಧಾನ ಸಭಾ ಸದಸ್ಯ ಮತು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರನ್ನು ಹೊಂದಿರುವ ಮಂಡ್ಯ ಜಿಲ್ಲೇಲೆ ದೊಡ್ಡದಾದ ಮಳವಳ್ಳೀಲಿ.

---

ಪ್ರಿಯ ಓದುಗರೆ, ಸಧ್ಯಕ್ಕೆ ತಿಂಗಳಿಗೊಮ್ಮೆ ಬರುವ 'ಶೋಷಿತ'ವನ್ನು ಮೊದಲಿನಂತೆಯೇ ಸ್ವೀಕರಿಸುತ್ತೀರೆಂದು ನಂಬುತ್ತೇವೆ.

—ಸಂ. ವರ್ಗ.

# ಬಡವನ ಗೋಳು

ೀಲಪ್ಪ ಬಡವ. ಅವನಿಗೆ ಜಮೀನಿರಲಿಲ್ಲ. ಆದರೂ ದುಡಿಯಬೇಕೆಂಬ ಹಂಬಲ ಅವನಲ್ಲಿ ಅಪಾರವಾ ತ್ತು. ಒಂದು ದಿನ ಅವನು, ತನ್ನ ಊರಿನವನೇ ದ ಸಾಹುಕಾರನಲ್ಲಿ "ಬುದ್ಧಿ ಗೇಣಿಗೆ ಅಂಗೈ ಅಗಲ ಲಕೊಟ್ಟರೆ ಅಂತ ತಲೆ ಕೆರೆದ. ಸಾಹುಕಾರನಿಗೆ ದೇ ಬೇಕಾಗಿತ್ತು. ತನ್ನ ಅವಶ್ಯಕತೆಗಿಂತ ಆತನಲ್ಲಿ ಮೀನು ಬಹಳವಾತ್ತು. ಆತ ನೀಲಪ್ಪನಿಗೆ ಅರ್ಧ ಕರೆ ವೀಳ್ಯದೆಲೆ ತೋಟವನ್ನು ಗೇಣಿಗೆ ಕೊಟ್ಟ.

ೀಲಪ್ಪ ತೋಟವನ್ನು ಬಹಳ ಚೆನ್ನಾಗಿ ನೋಡಿ ೊಳ್ಳುತ್ತಿದ್ದನು. ನಡುನಡುವೆ ಹಣಕ್ಕೆ ತೊಂದರೆ ಾದಾಗ ಸಾಹುಕಾರನ ಬಳಿ ಅಷ್ಟೋ ಇಷ್ಟೋ ಸಿಕೊಂಡು ಸಂಸಾರ ತೂಗಿಸುತ್ತಿದ್ದನು. ಪ್ರಸ್ತುತ ್ರಸಂಗ ನಡೆದ ವರ್ಷ ತೋಟದಲ್ಲಿ ವೀಳ್ಯದೆಲೆ ಬಹಳ ೊಗಸಾಗಿ ಬಂದಿದ್ದವು. ಸಾಹುಕಾರ ಸ್ವತಃ ಮಾಡಿ ದ್ದ ತೋಟಕ್ಕಿಂತ ನೀಲಪ್ಪ ಗೇಣಿಗೆ ಮಾಡಿದ್ದ ೋಟ ಬಹಳ ಚೆನ್ನಾಗಿತ್ತು. ಇದು ಸಾಹುಕಾರ ಗೆ ಸಂಕಟಕ್ಕಿಟ್ಟುಕೊಂಡಿತು.

ಂದು ದಿನ ಬೆಳಿಗ್ಗೆ ಸಾಹುಕಾರನು ನೀಲಪ್ಪನ ನೆಗೆ ಬಂದು "ಎಲೆ ನೀಲ ಈದಿನ ನೀನು ತೋಟಕ್ಕೆ ೋಗಬೇಡ ಕಣೋ" ಎಂದ. "ಯಾಕ ಬುದ್ಧಿ" ಂತ ನೀಲಪ್ಪ ಹೆದರಿ ನಿಂತ. "ಯಾಕ ಗೀಕ ನನಗೆ ೊತ್ತಿಲ್ಲ. ಬೇಡ ಅಂದ್ರೆ ಬೇಡ" ಎಂದು ರೇಗಿ ಹೇಳಿ ನೆಗೆ ಹೊರಟ. ದಿನಬೆಳಗಾದರೆ ನೀಲಪ್ಪ ಹೊಟ್ಟೆ ಾಡಿಗೆ ಸಾಹುಕಾರನನ್ನೇ ಆಶ್ರಯಿಸಬೇಕಾಗು ತ್ತು. ನೀಲಪ್ಪ ತನಗಿಂತ ಎಲ್ಲಿ ಹೆಚ್ಚು ಬೆಳೆದು ಣಸಂಪಾದಿಸಿ ತನ್ನ ಬಳಿ ಕೆಲಸಕ್ಕೆ ಬರದಂತಾಗು ನೊ ಎಂದು ತಿಳಿದ ಸಾಹುಕಾರ ಈ ಆಟ ಹೂಡಿ ನು.

ಂದು ರಾತ್ರಿ ಅಂಜಿಕೊಳ್ಳುತ್ತಲೇ ನೀಲಪ್ಪ ಸಾಹು- ಾರನ ಮನೆಗೆ ಬಂದ. ಊಟಮಾಡಿ ಕುಳಿತಿದ್ದ ಾಹುಕಾರ "ಯಾಕಲೇ ಬಂದೆ" ಎಂದ. ನೀಲಪ್ಪ; ನಾನು ಬಡವ ಬುದ್ಧಿ, ತೋಟ ಬಿಡಕಾಗದಿಲ್ಲ" ಂದು ಚಪ್ಪಲಿ ಬಿಟ್ಟಿದ್ದ ಸ್ಥಳದಲ್ಲಿ ಕುಳಿತ. "ಏ ನೀಲ ನ್ನ ಮದ್ವೆ ಸಾಲ ತೀರಿದೆ ಎಂದು ತಿಳಕೊಂಡೆಯಾ, ನ್ನೂ ಆರೂರು ಇದೆ ಕಣೋ. ಜೋಳ ತೆಗೆದು ೊಂಡುಹೋಗಿದ್ದು, ಅದು ಇದು ಸೇರಿ ಸಾವಿರ ರೂ. ಡೆ- ನಿನಗೆ ತೀರಿಸೋಕ್ಕೆ ಆಗುವು ಲ್ಲ. ಅದಕ್ಕೆ ೋಟ ಬಿಟ್ಟುಬಿಡು. ಅಲ್ಲಿಗೆ ಸರಿಹೋಗುತ್ತೆ-" ಂದು ಸಾಹುಕಾರ ಹೇಳಿದನು. ನೀಲಪ್ಪ "ಮುಂದಿನ ಂಗಳು ಎಲೆಕೊಯ್ದು ಹಣವನ್ನು ನೀವೇ ಮುರಿದು ೊಂಡುಬಿಡಿ ಬುದ್ಧಿ. ನಿಮ್ಮ ಅಳಾಗಿ ದುಡಿದು ೀಸಿ, ತೋಟ ಮಾತ್ರ ಬಿಡಿಸಬೇಡಿ ಬುದ್ಧಿ, ಎಂದು ಂಸರಿಯಾಗಿ ಬೇಡಿಕೊಂಡರೂ "ನಿನಗೆ ತೋಟ ಕೊಡುವುದೇ ಇಲ್ಲ" ಎಂದು ಖಡಾಖಂಡಿತವಾಗಿ ಸಾಹುಕಾರ ಹೇಳಿಬಿಟ್ಟ.

ಮಾರನೆಯ ದಿನ ಪಂಚಾಯ್ತಿಯೂ ಆಗಿ ಅಲ್ಲಿಯೂ ತೋಟವನ್ನು ಬಿಡುವುದೆಂದೇ ತೀರ್ಮಾನವಾಯಿತು. ಕೆಲಸ ಮಾಡದಿದ್ದರೂ ಸಾಹುಕಾರ ಲಾಭ ಪಡೆದು ಸುಖವಾಗಿದ್ದ. ಕಷ್ಟಪಟ್ಟು ದುಡಿದ ನೀಲಪ್ಪ ಮಾತ್ರ ಬರಿಗೈಯಲ್ಲಿ ಮನೆಗೆ ಬಂದು ಮುಖ ಒಣಗಿಸಿ ಕೊಂಡು ಕುಳಿತ.

ಹೀಗೆ ಈ ಸಮಾಜದಲ್ಲಿ ಕೆಲ ಮಾಡಿದರೂ ಕಷ್ಟ ಪಟ್ಟು ಬೆವರ ಹರಿಸಿದರೂ ಬಡವ ಬಡವನಾಗೇ ಇರು ತ್ತಾನೆ. ಚೂರೂ ಶ್ರಮವಹಿಸದ ಜಮೀನ್ದಾರ ದಿನೇ ದಿನೇ ಬೆಳೆಯುತ್ತಲೇ ಹೋಗುತ್ತಾನೆ. ಬಡವನ ಗೋಳುಮಾತ್ರ ತಪ್ಪುವುದಿಲ್ಲ.

– ಬಿ. ಮಾಂತೇಶಪ್ಪ
ಹನಗವಾಡಿ

* * * * || * * * * || * * * ||

### ಹೇಯ ಮೆರವಣಿಗೆ

ಬಾಗೇಪಲ್ಲಿ ತಾಲ್ಲೂಕು ಗೋಳೂರು ಹೋಬ್ಳಿ ಗಲಸರೆಡ್ಡಿಪಲ್ಲ ಗ್ರಾಮದ ಹರಿಜನ ಯುವತಿ ಒಬ್ಬಳು ಆ ಗ್ರಾಮದ ಜಮೀನ್ದಾರರ ಭೂಮಿ ಯಲ್ಲಿ ಕೂಲಿ ಕೆಲಸಕ್ಕೆ ಒಪ್ಪಿಕೊಂಡಿದ್ದು ಅನಿವಾರ್ಯ ಕಾರಣಗಳಿಂದ ಹಾಜರಾಗಲಿಲ್ಲ. ಜಮೀನ್‌ದಾರ ಕರೆದು ವಿಚಾರಿಸಿದಾಗ ತನ್ನ ತೊಂದರೆಗಳನ್ನು ನಿವೇದಿಸಿಕೊಂಡಳು. ಜಮೀನ್ದಾರನ ಎದುರು ಹೀಗೆ ಮಾತಾಡಿದ್ದ ಕ್ಕಾಗಿ ಅವನ ಹಿಂಬಾಲಕರು ಆಕೆಯನ್ನು ಬೇರೆಡೆಗೆ ಎಳೆದೊಯ್ದು ಮುಖಕ್ಕೆ ಸುಣ್ಣದ ಪಟ್ಟಿಗಳನ್ನು ಬರೆದು, ಕಿವಿಗೆ ಈರುಳ್ಳಿ ಗೆಡ್ಡೆ ಗಳನ್ನು ತೂಗುಹಾಕಿ ಡಂಗುರ ಹೊಡೆಸಿ, ಅಪಮಾನಕರ ರೀತಿಯಲ್ಲಿ ಮೆರವಣಿಗೆ ಮಾಡಲಾಯಿತು.

'ಕನ್ನಡ ಪ್ರಭ'
೬-೧. ೭೫

* * * || * * * * * || * * * || *

## ಗುಡಿಸಲುಗಳ ಭಸ್ಮ : ಯಾರು ಹೊಣೆ ?

"ಯಾರಿಗ್ಗೊತ್ತು ಸ್ವಾಮಿ. ಹಿಂಗೇ ಅಂತ ಹೆಂಗೆ ಹೇಳಕಾಯ್ತುದೆ. ಎಲ್ಲಾ ಗದ್ದೆತಕ್ಕೊಗಿದ್ದೊ"

ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಮಹದೇವಪುರದಲ್ಲಿ ಡಿಸೆಂಬರ್ ೨೫, ೧೯೭೪ರಂದು ಹರಿಜನರ ೪ ಗುಡಿಸಲುಗಳು ಬೆಂದುಹೋದದ್ದ ತಿಳಿದು ನಮ್ಮ ಪ್ರತಿನಿಧಿಗಳು ಭೆಟ್ಟಿ ಕೊಟ್ಟಾಗ ಬಂದ ಉತ್ತರವಿದು.

ನಲವತ್ತು ಕುಟುಂಬ ಹರಿಜನರಿರುವ ಮಹದೇವಪುರಕ್ಕೆ ಈಗೀಗ ಅಷ್ಟೇ ಇಪ್ಪತ್ತು ಅಂಶಗಳ ಕಾರ್ಯಕ್ರಮದ ಬಿಸಿ ಮುಟ್ಟುತ್ತಾ ಇದೆ.

ಗೌಡರ ಮನೆಗಳಲ್ಲಿ ಜೀತಕ್ಕಿದ್ದ ಸುಮಾರು ೦ಂಜನರು ಜೀತಬಿಟ್ಟು ಮನೆಗೆ ಬಂದು ಸ್ವಲ್ಪ ದಿನಗಳಾಗಿದ್ದವು. (ಇನ್ನೂ ಐದಾರು ಜನ ಜೀತದಿಂದ ಬಿಡಿಸಿಕೊಳ್ಳ ಲ್ಲಾಗಿಲ್ಲ) ಸರ್ಕಾರದ ಕಾನೂನಿಗೆ ಹೆದರಿ 'ಡಂಗೂರ ಬಡಿಸಿ ಜೀತವೇನೋ ಬಿಡಿಸಿಬಿಟ್ಟರು ಸಾಲದ ಹಿಂಸೆ ಮಾತ್ರ ತಪ್ಪಿಸಲಿಲ್ಲ.' ಸಾಲಕೊಟ್ಟವರು ಕಣ್ಣು ಕೆಂಪಗಾಗಿಸಿಕೊಂಡು "ನಿಮ್ಮಪ್ಪ ಸಾಲ ಕೊಟ್ಟಿದ್ನೊ...ಇಲ್ಲ ಸರ್ಕಾರ ಕೊಟ್ಟಿತ್ತೊ..? ನಿಮ್ಮ ಕಾನೂನು ಎಲ್ಲಿತನ್ಕ. ದುಡ್ಡು ವಾಪ್ಸುಕೊಟ್ರೆ ಸರಿ ಇಲ್ದಿದ್ರೆ ಹೆಂಗೆ ತಕ್ಕಬೇಕು ಅನ್ನದು ಗೊತ್ತುಹೋಗಿ" ಈ ಎಲ್ಲ ಬಿಸಿಬಿಸಿ ಮಾತಿನ ಗೊಂದಲಕ್ಕೆ ಸಿಕ್ಕಿಕೊಂಡ ಹರಿಜನರು ಕಂಗಾಲಾಗಿದ್ದಾರೆ.

ಸುಟ್ಟುಹೋದ ನಾಲ್ಕು ಮನೆಗಳಲ್ಲಿ ಸುಮಾರು ಹತ್ತು ಸಂಸಾರಗಳಿದ್ದವು, ಮೊಟ್ಟಮೊದಲು ಬೆಂಕಿ ಹತ್ತಿಕೊಂಡವರ ಮನೆಯಲ್ಲೂ ಜೀತದಿಂದ ಬಿಡುಗಡೆ ಹೊಂದಿ ಬಂದಿದ್ದವನೊಬ್ಬನು ಇದ್ದಾನೆ. ಮನೆಗಳು ಬೆಂಕಿಯಲ್ಲಿ ಉರಿಯುತ್ತಿದ್ದಾಗ ಊರ ಗೌಡ, ಪಟೇಲರೇ ಮುಂದೆ ನಿಂತು ಬೆಂಕಿ ಕೆಡಿಸುವಲ್ಲಿ ಸಹಕರಿಸಿದರು.

'ನಾವಂತು ಮನೆಯಲ್ಲಿರಲಿಲ್ಲ ಯಾರ ಮೇಲೆ ತಪ್ಪೊರ್ಸೋದು ಸ್ವಾಮಿ?'

---


ಇಂದೇ ಕೊಂಡು ಓದಿರಿ
ಹುದುಗಿದ್ದ ದಲಿತ ದನಿ ಹೊರಬಂದಿದೆ
'ಸಿದ್ದಲಿಂಗಯ್ಯ' ಅವರ

## ಹೊಲೆ ಮಾದಿಗರ ಹಾಡು

ಪ್ರತಿಗಳಿಗೆ :
–ಸಿದ್ದಲಿಂಗಯ್ಯ,
ಅಂತಿಮ ಎಂ.ಎ. ವಿದ್ಯಾರ್ಥಿ
ಕನ್ನಡ ಅಧ್ಯಯನ ಸಂಸ್ಥೆ
ಬೆಂಗಳೂರು ವಿಶ್ವವಿದ್ಯಾಲಯ

---

ಹೊಸ ಸ್ವರೂಪದೊಂದಿಗೆ
ಮತ್ತೆ ನಿಮ್ಮ ಕೈಸೇರುತ್ತಿದೆ

## ಆಂದೋಲನ

ವಿವರಗಳಿಗೆ :
'ಆಂದೋಲನ' ವಾರಪತ್ರಿಕೆ
೨೬೪/೨, ಕೆ. ಜಿ. ಕೊಪ್ಪಲು
ಮೈಸೂರು-೯




## ಕಣ್ಣೋಟ

ಭಾಗ– ೧

ಒಂದು ಹೋಬಳಿಯಂಥ ಊರು ಅದು. ಆ ಊರಲ್ಲಿ ಇತ್ತೀಚೆಗೆ ಜೀತಗಾರರ ಬಿಡುಗಡೆಯಾಗಿತ್ತು. ಒಂದು ಬಹಿರಂಗ ಸಭೆ ಮಾಡಿ ಆ ಊರಿನ ಜೀತಗಾರರನ್ನೆಲ್ಲ ಒಟ್ಟು ಸೇರಿಸಿ ಅವರಿಗೆಲ್ಲ ಬಿಡುಗಡೆಯಾಗಿದೆ ಎಂದು ಸಾರಲಾಯ್ತು. ಜೀತಗಾರರು ತಮ್ಮ ಸವೆದು ಹೋದ ತಲೆಯನ್ನು ಸವರಿಕೊಂಡು ಮನೆಯಿದ್ದವರು ತಂತಮ್ಮ ಮನೆಗೊ ಅಥವಾ ಮನೆ ಇಲ್ಲದವರು ಮಾಮೂಲು ಮಲಗುವ ಚಾವಡಿಯಲ್ಲೊ ಉಪಸ್ಥಿತರಾಗಿದ್ದರು. ಚಾವಡಿಯಲ್ಲಿ ಸೇರಿದ್ದ ಕೆಲವರು ಪದ ಹೇಳುತ್ತಿದ್ದರು. ಕೆಲವರು ಹರಟುತ್ತಿದ್ದರು. ಕೆಲವರು ಮಲಗಿದ್ದರು ಕೆಲವರು ಮಲಗಲು ರಡಿಯಾಗುತ್ತಿದ್ದರು. ಕೆಲವರು ಅವರವರ ಒಡೆಯರಿಗೆ ತಮ್ಮ ಜೀತ ಬಿಡುಗಡೆಯಿಂದ ಉಂಟಾದ ನಷ್ಟ ಎಷ್ಟು ಎಂದು ಎಣಿಸಿ ಎಣಿಸಿ ಖುಷಿ ಪಡುತ್ತಿದ್ದರು! ತಾವು ಒಡೆಯರಿಂದ ಪಡೆದ ಇನ್ನೂರು ಮುನ್ನೂರಕ್ಕೆ ಹುಟ್ಟಿದಾರಭ್ಯ ಜೀತ ಮಾಡುತ್ತ ಬಂದಿದ್ದರೂ ಕೂಡ, ಈಗ ಬಿಡುಗಡೆಯಾಗಿರುವುದು ತಮ್ಮ ಒಡೆಯರಿಗೆ ನಷ್ಟ! ಎಂದೇ ಅವರು ಎಣಿಸುತ್ತಿದ್ದರು. ಅವರ ತಲೆಯೊಳಗಿನ ಈ ಭಾಗದ ಮೆದುಳನ್ನು ಕತ್ತರಿಸಿ ಹೊರಹಾಕಬೇಕಿತ್ತು. ಹೇಗೆಂದು ತಿಳಿಯದೆ ಏನೂ ತೋಚದೆ ಸುಮ್ಮನಾದೆ.

ಕೊನೆಗೆ ಅವರೊಡನೆ ಮಾತಾಡಿದೆ. ಅವರು ತುಂಬ ಉಲ್ಲಸಿತರಾಗಿದ್ದರು. ಅವರ ಉಲ್ಲಾಸ ಯಾವ ಹೊಲೆ ಮಾದಿಗನನ್ನೂ ಭಾವುಕನನ್ನಾಗಿಸುವಂತೆ ಇತ್ತು. ಇವರ ನಾಳೆಗೇನು? ಎಂದು ನಾನು ಯೋಚಿಸುತ್ತಿದ್ದೆ. ಅವರು ಅದರ ಬಗ್ಗೆ ಯೋಚಿಸುತ್ತಿದ್ದಂತೆ ಕಾಣುತ್ತಿರಲಿಲ್ಲ. ಅಷ್ಟು ಉತ್ಕಟವಾಗಿ ಅವರು ಆ ಬಿಡುಗಡೆಯ ಕ್ಷಣದಲ್ಲಿ ಇದ್ದರು. ಅದನ್ನು ಉಂಡು ನನಗೆ ಅನ್ನಿಸಿತು: "ಜೀತ ಪದ್ಧತಿ ರದ್ದು - ಅವರ ನಾಳೆಗೆ ಏನು?" ಈ ಪ್ರಶ್ನೆ ಇದ್ದೇ ಇದೆ. ಇಂಥ ಪ್ರಶ್ನೆಗಳು ನೂರು ಇರಲಿ. ನೂರೇ ಬರಲಿ. ಆದರೆ ಜೀತ ಪದ್ಧತಿ ರದ್ದಾಗಲಿ. ನಾವು ಜೀತ ಮಾಡುವಾಗಲೂ ಕತ್ತಲಲ್ಲಿ ಇದ್ದೆವು. ಈಗ ಜೀತ ರದ್ದಾದಾಗಲೂ ದಿಕ್ಕಿಲ್ಲದೆ ಕತ್ತಲಲ್ಲೇ ಇರಬೇಕಾಗುತ್ತದೆ. ಈ ಎರಡು ಕತ್ತಲುಗಳಲ್ಲಿ ಎರಡನೇ ಕತ್ತಲೇ ಇರಲಿ"

ಭಾಗ– 2

ಅದೇ ಊರಿನ ಅದೇ ಸ್ಥಳಕ್ಕೆ ಹೋದೆ. ಯಾಕೋ ಮೊದಲಿನ ಉಲ್ಲಾಸಕ್ಕೆ ಮಂಕು ಬಡಿದಿತ್ತು. ಎಲ್ಲರೂ ನಿಸ್ಸಾರರಾಗಿದ್ದರು. ಮೊದಲಿನಷ್ಟು ಜನರೂ ಸೇರಿರಲಿಲ್ಲ. ಉಳಿದವರೆಲ್ಲ ಎಲ್ಲಿ ಹೋದರು? ಎಂದು ಕೇಳಿದೆ. ಹೊಟ್ಟೆಯಾಪ್ತಿಗೆ ಕಾಫಿ ತೋಟದ ಕಡೆಗೆ ದೇಶಾಂತರ ಹೋಗವರೆ ಎಂದು ತಿಳಿದು ಬಂತು. ಯಾಕೆ ಇಲ್ಲಿ ಕೆಲಸ ಸಿಗುತ್ತಿರಲಿಲ್ಲವಾ? ಎಂದು ಕೇಳಿದೆ. ನನ್ನ ಪ್ರಶ್ನೆ ಕೇಳಿ ಅವರು ತಳಮಳಿಸ ತೊಡಗಿದರು. ಆಮೇಲೆ ತಿಳಿದು ಬಂತು- ಜೀತ ಬಿಡುಗಡೆಯಾದ ಯಾರನ್ನೂ ಕೆಲಸಕ್ಕೆ ಕರೆಯುತ್ತಿರಲಿಲ್ಲ. ತಮ್ಮ ಹಂಗು ತೊರೆದು ಜೀತದಿಂದ ಬಿಡುಗಡೆಯಾದವರು ಹೇಗೆ ಬದುಕುವರೋ ಎಂದು ನೋಡಲು ಭೂ ಒಡೆಯರು ಅಪೇಕ್ಷಿಸಿರುವರು. ಈ ಜಿದ್ದು ಯಾಕೆಂದು ಅರ್ಥಮಾಡಿಕೊಳ್ಳಲು ಬಹಳ ಕಷ್ಟಪಟ್ಟೆ. ಮೇಲುಜಾತಿ ಹಣವಂತರಿಗೆ ದಲಿತರ ಬಗ್ಗೆ ಜಿದ್ದು ಅಸಹನೆ ರಕ್ತಗತವಾಗಿರುವುದಕ್ಕೆ ಕಾರಣವೇನು ಕಾರಣವೇನೆಂದು ಬಹಳ ಯೋಚಿಸಿದೆ. ಮೇಲು ಜಾತಿ ಭೂ ಮಾಲಿಕರ ಹಣವಂತರ ದೇಹದಲ್ಲಿ ಹಾಲಿ ಇರುವ ರಕ್ತವನ್ನು ಸಂಪೂರ್ಣ ಹೊರತೆಗೆದು ಹೊಸರಕ್ತ ಕೊಟ್ಟರೆ ಅವರ ಜಿದ್ದು ಅಸಹನೆ ಹೋಗುವುದೆ? ನಾ ಅರಿಯೆ?

ಜೀತ ಪದ್ಧತಿ ರದ್ದಾದ ಕೂಡಲೇ ಭೂ ಮಾಲಿಕರು ಒಂದು ಕ್ರೂರ ಕೆಲಸ ಮಾಡಿದ್ದರು. ಅದೇನೆಂದರೆ ಅವರೆಲ್ಲ ಸೇರಿ ಸಹಕಾರ ಸಂಘದಿಂದ ಹೊಲ ಉಳುವ ಅಮಾನುಷ ಸಾಧನವಾದ ಒಂದು ಟ್ರಾಕ್ಟರನ್ನು ತಂದಿದ್ದರು. ಈಗ ಅವರಿಗೆ ಯಾರ ಕೂಲಿಯ ಹಂಗೂ ಇರಲಿಲ್ಲ. ಈಗ ಕೂಲಿಗಳನ್ನು ನೆಚ್ಚಿಕೊಂಡು ಅವರ ಹೊಲ ಪಾಳು ಬೀಳುವಂತಿರಲಿಲ್ಲ. ಜೀತದಿಂದ ಬಿಡುಗಡೆಯಾದವರಿಗೆ ಕೂಲಿಯಾದರೂ ಸಿಗುತ್ತಲ್ಲ ಎಂಬ ನನ್ನ ಎಣಿಕೆ ಉಲ್ಟಾ ಆಗಿತ್ತು. ಟ್ರಾಕ್ಟರು ಬಂದು ಕೆಲಸಗಾರರ ಕೈಕಾಲುಗಳಿಗೆ ಕೆಲಸ ಸಿಗದಂತೆ ಮಾಡಿ ಅವರನ್ನು ಕಂಗೆಡಿಸಿತ್ತು. ಟ್ರಾಕ್ಟರ್‌ನಂಥ ಮಿಷನ್ನುಗಳು ಬರುವುದೆಂದರೆ ಕೆಲಸಗಾರರ ಕೈಕಾಲುಗಳನ್ನು ಕಡಿದಂತೆಯೇ ಎಂಬುದನ್ನು ಕಣ್ಣಾರೆ ಕಂಡೆ. ಕೆಲಸಗಾರರ ಜೀವ ಇರುವ ಹೊಟ್ಟೆ ಮೇಲೆ ಈ ಜೀವರಹಿತ ಮಿಷನ್ನು ಕ್ರೂರವಾಗಿ ಹರಿದಿತ್ತು. ಭೂಒಡೆಯರು ಗಹಗಹಿಸಿ ನಗುತ್ತಿದ್ದರು.

ಭಾಗ– ೩

ರಾತ್ರಿ ಬಹಳ ಹೊತ್ತಿನವರೆಗೆ ನನಗೆ ನಿದ್ರೆ ಬರಲಿಲ್ಲ. ಬೆಳಗಿನಜಾವದಲ್ಲಿ ಒಂದು ಕನಸು ಬಿತ್ತು. ಅದೇನೆಂದರೆ ಜೀತದಾಳುಗಳು ಕೆಲಸಗಾರರು ಸೇರಿ ಭೂ ಮಾಲಿಕರ ಹಾಲಿ ಭೂಮಿಯನ್ನು ಆಕ್ರಮಿಸಿಕೊಂಡಿದ್ದರು. ತಮ್ಮನ್ನೆಲ್ಲ ಬೀದಿ-ಪಾಲು ಮಾಡಿದ ಅಮಾನುಷವಾದ ರಕ್ಕಸರಂಥ ಮಿಷನ್ನುಗಳನ್ನು ಪುಡಿಪುಡಿ ಮಾಡಿ ಸದೆ ಬಡೆಯುತ್ತಿದ್ದರು. ಎಚ್ಚರವಾದ ಮೇಲೆ ಅನ್ನಿಸಿತು- ಉಳಿಯಬೇಕಾದರೆ ಕನಸು ನನಸಾಗಲೇಕು.

—ಕಿಡಿಗೇಡಿ.

---

ಸರ್ಕಾರ ಕಾರ್ಮಿಕರ ಒಟ್ಟು ಸಂಖ್ಯೆಯನ್ನು ಅರಿಯಲು ನೇಮಿಸಿದ್ದ 'ರಾಷ್ಟ್ರೀಯ ಕಾರ್ಮಿಕರ ಆಯೋಗ' ನಡೆಸಿದ ಸಮೀಕ್ಷೆಯಿಂದ ಆಯ್ದ ಭಾಗಗಳು. ಇಲ್ಲಿ ಇಂಡಿಯಾದ ವಿವಿಧ ರಾಜ್ಯಗಳಲ್ಲಿ ಕೆಲಸ ಮಾಡುತ್ತಿರುವ ಪೌರ ಕಾರ್ಮಿಕರ ವಿವರಗಳನ್ನು ಕೊಡಲಾಗಿದೆ.

| ರಾಜ್ಯದ ಹೆಸರು | ಜನಸಂಖ್ಯೆ |
|---|---|
| 1. ಆಂದ್ರ ಪ್ರದೇಶ | 43,883 |
| 2. ಅಸ್ಸಾಂ | 7,018 |
| 3. ಬಿಹಾರ್ | 37,430 |
| 4. ಗುಜರಾತ್ | 35.111 |
| 5. ಜಮ್ಮು ಮತ್ತು ಕಾಶ್ಮೀರ | 5.230 |
| 6. ಕೇರಳ | 15,742 |
| 7. ಮಧ್ಯಪ್ರದೇಶ | 58,720 |
| 8. ಮದ್ರಾಸ್ | 38,518 |
| 9. ಮಹಾರಾಷ್ಟ್ರ | 72,535 |
| 10. ಕರ್ನಾಟಕ | 30,174 |
| 11. ಒರಿಸ್ಸಾ | 6,573 |
| 12. ಪಂಜಾಬ್ | 1,04,454 |
| 13. ರಾಜಾಸ್ತಾನ | 50,832 |
| 14. ಉತ್ತರ ಪ್ರದೇಶ | 2,19,406 |

## ಟಿಪ್ಪಣಿಗಳು

ಸಾಮಾನ್ಯವಾಗಿ ಎಲ್ಲಾ ಪೌರ ಕಾರ್ಮಿಕರು ಬಡ್ಡಿ ಸಾಲದಿಂದ ನರಳುತ್ತಾರೆ. ಕಾರಣ ಅವರು ನಿತ್ಯ ಬದುಕಿಗಾಗಿ ಸಾಲಮಾಡುತ್ತಾರೆ. ಈ ಸಾಲವನ್ನು ಸಾಮಾನ್ಯವಾಗಿ ಕುಡಿತ, ಬೀಡಿ ಸಿಗರೇಟುಗಳಿಗಾಗಿ ಮಾಡುತ್ತಾರೆ. ತಾವು ಮಾಡಿದ ಈ ಸಾಲವನ್ನು ತೀರಿಸಲು ಮತ್ತೆ ಸಾಲಮಾಡುತ್ತಾರೆಂದು ಆಯೋಗ ಅಭಿಪ್ರಾಯ ಪಟ್ಟಿದೆ.

—ಲಕ್ಷ್ಮಿ.

---

ಸಂಪಾದಕ : ಇಂದೂಧರ ಹೊನ್ನಾಪುರ

ಪ್ರಕಾಶಕ : ಎಚ್. ಗೋವಿಂದಯ್ಯ

ಸಹಾಯ : ಶಿವಾಜಿ ಗಣೇಶನ್
ಶಿವಮಲ್ಲ ದೇವನೂರ

ವಿಳಾಸ : ೫೧೬, ೧೫ನೇ ಮೇನ್
ಸರಸ್ವತಿಪುರಂ, ಮೈಸೂರು-೯

ಮುದ್ರಣ : ಆಂದೋಲನ ಮುದ್ರಣ
ಕೆ. ಜಿ. ಕೊಪ್ಪಲು, ಮೈಸೂರು-೯